# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೨<br>Volume 152 | ಬೆಂಗಳೂರು, ಗುರುವಾರ, ಫೆಬ್ರವರಿ ೧೬, ೨೦೧೭ (ಮಾಘ ೨೭, ಶಕ ವರ್ಷ ೧೯೩೮)<br>Bengaluru, Thursday, February 16, 2017 (Magha 27, Shaka Varsha 1938) | ಸಂಚಿಕೆ ೭<br>Issue 7 |
|---|---|---|


## ಭಾಗ ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

### ಕರ್ನಾಟಕ ಲೋಕಸೇವಾ ಆಯೋಗ, ಉದ್ಯೋಗ ಸೌಧ, ಬೆಂಗಳೂರು

**ಸೇರ್ಪಡೆ ಅಧಿಸೂಚನೆ**

**ಸಂಖ್ಯೆ: ಆರ್(3)76/2016-17ಪಿಎಸ್‌ಸಿ, ದಿನಾಂಕ: 13-01-2017.**

ಉಲ್ಲೇಖ : 1. ಆಯೋಗದ ಅಧಿಸೂಚನೆ ಸಂಖ್ಯೆ: ಆರ್(3)45/2016-17/ಪಿಎಸ್‌ಸಿ, ದಿನಾಂಕ:16-11-2016.

2. ಆಯೋಗದ ಸೇರ್ಪಡೆ ಅಧಿಸೂಚನೆ ಸಂಖ್ಯೆ:ಆರ್(3)59/2016-17/ಪಿಎಸ್‌ಸಿ, ದಿನಾಂಕ: 15-12-2016.

ಕರ್ನಾಟಕ ಸರ್ಕಾರದ ವಿವಿಧ ಇಲಾಖೆಗಳಲ್ಲಿನ ಶೀಘ್ರಲಿಪಿಗಾರರು ಮತ್ತು ಬೆರಳಚ್ಚುಗಾರರ ಹುದ್ದೆಗಳಿಗೆ ಕರ್ನಾಟಕ ನಾಗರಿಕ ಸೇವೆಗಳು (ಶೀಘ್ರಲಿಪಿಗಾರರ ಮತ್ತು ಬೆರಳಚ್ಚುಗಾರರ ನೇಮಕಾತಿ) ನಿಯಮಗಳು, 1983 ಹಾಗೂ ಕಾಲಕಾಲಕ್ಕೆ ತಿದ್ದುಪಡಿ ಮಾಡಲಾದ ನಿಯಮಗಳನ್ವಯ ಅರ್ಹ ಅಭ್ಯರ್ಥಿಗಳನ್ನು ಆಯ್ಕೆ ಮಾಡಲು ಉಲ್ಲೇಖ-1 ರನ್ವಯ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಲಾಗಿತ್ತು. ಸದರಿ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಲಾಗಿರುವ ಅವಕಾಶದಂತೆ, ಕೆಲವೊಂದು ಪ್ರಾಧಿಕಾರಗಳು ತಮ್ಮ ಇಲಾಖೆಗಳಲ್ಲಿ ಖಾಲಿಯಿರುವ ಬೆರಳಚ್ಚುಗಾರರು/ಶೀಘ್ರಲಿಪಿಗಾರರ ಹುದ್ದೆಗಳ ನೇಮಕಾತಿಗಾಗಿ ಪ್ರಸ್ತುತ ಜಾರಿಯಲ್ಲಿರುವ ಮೀಸಲಾತಿ ನಿಯಮಗಳನ್ವಯ ದೃಢೀಕರಿಸಿ ಸಲ್ಲಿಸಿರುವ ವರ್ಗೀಕರಣದ ಮೇರೆಗೆ, ಉಲ್ಲೇಖ(2)ರಲ್ಲಿನ ಹುದ್ದೆಗಳನ್ನು ಉಲ್ಲೇಖ(1)ರ ಮುಖ್ಯ ಅಧಿಸೂಚನೆಯಡಿ ಸೇರ್ಪಡೆಗೊಳಿಸಿ ಪ್ರಕಟಿಸಲಾಗಿರುತ್ತದೆ. ಅದರಂತೆ ಅಧಿಸೂಚನೆಯಲ್ಲಿನ ಅನುಬಂಧ-2 ಮತ್ತು 3ರಲ್ಲಿ ಪ್ರಕಟಿಸಲಾದ ಹುದ್ದೆಗಳ ಜೊತೆಗೆ ಈ ಕೆಳಕಂಡ ನೇಮಕಾತಿ ಪ್ರಾಧಿಕಾರಗಳಲ್ಲಿ ಖಾಲಿಯಿರುವ ಶೀಘ್ರಲಿಪಿಗಾರರು ಮತ್ತು ಬೆರಳಚ್ಚುಗಾರರ ಹುದ್ದೆಗಳನ್ನು ಸೇರ್ಪಡೆ ಮಾಡಿದ್ದು, ಈ ವಿವರಗಳನ್ನು ಅಭ್ಯರ್ಥಿಗಳ ಮಾಹಿತಿಗಾಗಿ ಈ ಮೂಲಕ ಪ್ರಕಟಿಸಲಾಗಿದೆ.

**ಸೇರ್ಪಡೆ ಅಧಿಸೂಚನೆ-2 [Addendum-2]**

| ಕ್ರಮ ಸಂಖ್ಯೆ | ಇಲಾಖೆಗಳ ಹೆಸರು | ಶೀಘ್ರಲಿಪಿಗಾರರು | | ಬೆರಳಚ್ಚುಗಾರರು | |
|---|---|---|---|---|---|
| | | ಉಳಿಕೆ ಮೂಲ ವೃಂದದ ಹುದ್ದೆಗಳು | ಹೈ.ಕ ಹುದ್ದೆಗಳು | ಉಳಿಕೆ ಮೂಲ ವೃಂದದ ಹುದ್ದೆಗಳು | ಹೈ.ಕ ಹುದ್ದೆಗಳು |
| 1 | ಜಿಲ್ಲಾಧಿಕಾರಿಗಳ ಕಛೇರಿ, ಕಲಬುರಗಿ ಜಿಲ್ಲೆ | – | – | – | 05 |
| 2. | ಜಿಲ್ಲಾಧಿಕಾರಿಗಳ ಕಛೇರಿ, ಯಾದಗಿರಿ ಜಿಲ್ಲೆ | – | – | 02 | 09 |
| 3. | ಕೃಷಿ ಆಯುಕ್ತಾಲಯ, ಬೆಂಗಳೂರು | – | 03 | – | 22 |
| | | – | – | 02 | 36 |
| | | **03** | | **38** | |
| | ಒಟ್ಟು | **41** | | | |

**ಅನುಬಂಧ–1**

**ಶೀಘ್ರಲಿಪಿಗಾರರ ಹುದ್ದೆಗಳ ವರ್ಗೀಕರಣ**

**1. ಕೃಷಿ ಆಯುಕ್ತಾಲಯ, ಬೆಂಗಳೂರು**

**ಹೈದರಾಬಾದ್–ಕರ್ನಾಟಕ ವೃಂದದ ಹುದ್ದೆಗಳ ಸಂಖ್ಯೆ–03**

| ಮೀಸಲಾತಿ | ಇತರೆ | ಮಹಿಳಾ | ಗ್ರಾಮೀಣ | ಮಾ.ಸೈ | ಕ.ಮಾ | ಅಂ.ವಿ | ಯೋ.ಅ | ಒಟ್ಟು |
|---|---|---|---|---|---|---|---|---|
| ಪ.ಜಾ | 01 | – | – | – | – | – | – | 01 |
| ಪ.ಪಂ | 01 | – | – | – | – | – | – | 01 |
| ಪ್ರ–1 | – | – | – | – | – | – | – | – |
| ಪ್ರ–2(ಎ) | – | – | – | – | – | – | – | – |
| ಪ್ರ–2(ಬಿ) | – | – | – | – | – | – | – | – |
| ಪ್ರ–3(ಎ) | – | – | – | – | – | – | – | – |
| ಪ್ರ–3(ಬಿ) | – | – | – | – | – | – | – | – |
| ಸಾ.ಅ | 01 | – | – | – | – | – | – | 01 |
| **ಒಟ್ಟು** | **03** | – | – | – | – | – | – | **03** |

**ಅನುಬಂಧ–2**

**ಬೆರಳಚ್ಚುಗಾರರ ಹುದ್ದೆಗಳ ವರ್ಗೀಕರಣ**

**1. ಜಿಲ್ಲಾಧಿಕಾರಿಗಳ ಕಛೇರಿ, ಕಲಬುರಗಿ ಜಿಲ್ಲೆ**

**ಹೈದರಾಬಾದ್–ಕರ್ನಾಟಕ ವೃಂದದ ಹುದ್ದೆಗಳ ಸಂಖ್ಯೆ–05**

| ಮೀಸಲಾತಿ | ಇತರೆ | ಮಹಿಳಾ | ಗ್ರಾಮೀಣ | ಮಾ.ಸೈ | ಕ.ಮಾ | ಅಂ.ವಿ | ಯೋ.ಅ | ಒಟ್ಟು |
|---|---|---|---|---|---|---|---|---|
| ಪ.ಜಾ | – | – | – | – | – | – | – | – |
| ಪ.ಪಂ | 01 | – | – | – | – | – | – | 01 |
| ಪ್ರ–1 | 01 | – | – | – | – | – | – | 01 |
| ಪ್ರ–2(ಎ) | – | – | – | – | – | – | – | – |
| ಪ್ರ–2(ಬಿ) | – | – | – | – | – | – | – | – |
| ಪ್ರ–3(ಎ) | – | – | – | – | – | – | – | – |
| ಪ್ರ–3(ಬಿ) | – | – | – | – | – | – | – | – |
| ಸಾ.ಅ | 01 | 01 | 01 | – | – | – | – | 03 |
| **ಒಟ್ಟು** | **03** | **01** | **01** | – | – | – | – | **05** |

**2. ಜಿಲ್ಲಾಧಿಕಾರಿಗಳ ಕಛೇರಿ, ಯಾದಗಿರಿ ಜಿಲ್ಲೆ**

**ಹೈದರಾಬಾದ್–ಕರ್ನಾಟಕ ವೃಂದದ ಹುದ್ದೆಗಳ ಸಂಖ್ಯೆ–09**

| ಮೀಸಲಾತಿ | ಇತರೆ | ಮಹಿಳಾ | ಗ್ರಾಮೀಣ | ಮಾ.ಸೈ | ಕ.ಮಾ | ಅಂ.ವಿ | ಯೋ.ಅ | ಒಟ್ಟು |
|---|---|---|---|---|---|---|---|---|
| ಪ.ಜಾ | 01 | 01 | – | – | – | – | – | 02 |
| ಪ.ಪಂ | 01 | – | – | – | – | – | – | 01 |
| ಪ್ರ–1 | 01 | – | – | – | – | – | – | 01 |
| ಪ್ರ–2(ಎ) | 01 | – | – | – | – | – | – | 01 |
| ಪ್ರ–2(ಬಿ) | – | – | – | – | – | – | – | – |
| ಪ್ರ–3(ಎ) | – | – | – | – | – | – | – | – |
| ಪ್ರ–3(ಬಿ) | – | – | – | – | – | – | – | – |
| ಸಾ.ಅ | 01 | 01 | 01 | – | – | 01* | – | 04 |
| **ಒಟ್ಟು** | **05** | **02** | **01** | – | – | **01*** | – | **09** |
| **ವಿಕಲಚೇತನರು: ಅಂದ*/ದೃಷ್ಟಿಮಾಂದ್ಯ** | | | | | | | | |

(ಉಳಿಕೆ ಮೂಲ ವೃಂದದ) ಹುದ್ದೆಗಳು–02

| ಮೀಸಲಾತಿ | ಇತರೆ | ಮಹಿಳಾ | ಗ್ರಾಮೀಣ | ಮಾ.ಸೈ | ಕ.ಮಾ | ಅಂ.ವಿ | ಯೋ.ಅ | ಒಟ್ಟು |
|---|---|---|---|---|---|---|---|---|
| ಪ.ಜಾ | 01 | – | – | – | – | – | – | 01 |
| ಪ.ಪಂ | – | – | – | – | – | – | – | – |
| ಪ್ರ–1 | – | – | – | – | – | – | – | – |
| ಪ್ರ–2(ಎ) | – | – | – | – | – | – | – | – |
| ಪ್ರ–2(ಬಿ) | – | – | – | – | – | – | – | – |
| ಪ್ರ–3(ಎ) | – | – | – | – | – | – | – | – |
| ಪ್ರ–3(ಬಿ) | – | – | – | – | – | – | – | – |
| ಸಾ.ಅ | 01 | – | – | – | – | – | – | 01 |
| **ಒಟ್ಟು** | **02** | – | – | – | – | – | – | **02** |

**3. ಕೃಷಿ ಆಯುಕ್ತಾಲಯ, ಬೆಂಗಳೂರು**

**ಹೈದರಾಬಾದ್–ಕರ್ನಾಟಕ ವೃಂದದ ಹುದ್ದೆಗಳ ಸಂಖ್ಯೆ–22**

| ಮೀಸಲಾತಿ | ಇತರೆ | ಮಹಿಳಾ | ಗ್ರಾಮೀಣ | ಮಾ.ಸೈ | ಕ.ಮಾ | ಅಂ.ವಿ | ಯೋ.ಅ | ಒಟ್ಟು |
|---|---|---|---|---|---|---|---|---|
| ಪ.ಜಾ | – | 01 | 01 | – | – | 01* | – | 03 |
| ಪ.ಪಂ | 01 | 01 | – | – | – | – | – | 02 |
| ಪ್ರ–1 | – | – | – | – | – | – | – | – |
| ಪ್ರ–2(ಎ) | – | – | 02 | – | – | 01* | – | 03 |
| ಪ್ರ–2(ಬಿ) | – | – | – | – | – | – | – | – |
| ಪ್ರ–3(ಎ) | 01 | 01 | – | – | – | – | – | 02 |
| ಪ್ರ–3(ಬಿ) | 01 | 01 | – | – | – | – | – | 02 |
| ಸಾ.ಅ | – | 02 | 03 | 02 | 01 | 01* | 01 | 10 |
| **ಒಟ್ಟು** | **03** | **06** | **06** | **02** | **01** | **03** | **01** | **22** |
| **ವಿಕಲಚೇತನರು: ಅಂದ*/ದೃಷ್ಟಿಮಾಂದ್ಯ** | | | | | | | | |

P.R. 9
SC-250

**ಎನ್. ಎಸ್. ಪ್ರಸನ್ನಕುಮಾರ್**
ಕಾರ್ಯದರ್ಶಿ,
ಕರ್ನಾಟಕ ಲೋಕಸೇವಾ ಆಯೋಗ.

## ಕರ್ನಾಟಕ ಲೋಕ ಸೇವಾ ಆಯೋಗ ಉದ್ಯೋಗ ಸೌಧ, ಬೆಂಗಳೂರು–560 001

### ತಿದ್ದುಪಡಿ

**ಸಂಖ್ಯೆ:ಆರ್(3) 78/2016–17/ಪಿಎಸ್‌ಸಿ, ದಿನಾಂಕ: 16–01–2017.**

ಆಯೋಗದ ಮುಖ್ಯ ಅಧಿಸೂಚನೆ ಸಂಖ್ಯೆ:ಆರ್(3)45/2016–17/ಪಿಎಸ್‌ಸಿ, ದಿನಾಂಕ:16–11–2016ರಲ್ಲಿ ಅಧಿಸೂಚಿಸಲಾದ ರಾಜ್ಯ ಪತ್ರದಲ್ಲಿ ಅನುಬಂಧ–2ರ (ಕ್ರಮ ಸಂಖ್ಯೆ–10) ತೋಟಗಾರಿಕೆ ನಿರ್ದೇಶನಾಲಯ, ಲಾಲ್‌ಬಾಗ್, ಬೆಂಗಳೂರು ಈ ಇಲಾಖೆಯ **ಬೆರಳಚ್ಚುಗಾರರ** ಹುದ್ದೆಯ ವರ್ಗೀಕರಣದಲ್ಲಿ **ಉಳಿಕೆ ಮೂಲ ವೃಂದದ ಹುದ್ದೆಗಳು–01** ಎಂದಿದ್ದು, ಇದನ್ನು **ರಾಜ್ಯಮಟ್ಟದ ಸ್ಥಳೀಯ ವೃಂದದ ಹುದ್ದೆಗಳು–01** ಎಂದು ಓದಿಕೊಳ್ಳತಕ್ಕದ್ದು; ಮತ್ತು ಸೇರ್ಪಡೆ ಅಧಿಸೂಚನೆ ಸಂಖ್ಯೆ:ಆರ್(3)59/2016–17/ಪಿಎಸ್‌ಸಿ, ದಿನಾಂಕ:15–12–2016ರ ಅನುಬಂಧ–1ರಲ್ಲಿನ (ಕ್ರಮಸಂಖ್ಯೆ–7) ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು ಈ ಇಲಾಖೆಯ **ಶೀಘ್ರಲಿಪಿಗಾರರ** ಹುದ್ದೆಯ ವರ್ಗೀಕರಣದಲ್ಲಿ **ಹೈದರಾಬಾದ್–ಕರ್ನಾಟಕ ಸ್ಥಳೀಯ ವೃಂದದ ಹುದ್ದೆಗಳು–02** ಎಂದಿದ್ದು, ಇದನ್ನು **ಉಳಿಕೆ ಮೂಲ ವೃಂದದ ಹುದ್ದೆಗಳು–02** ಎಂದು ಓದಿಕೊಳ್ಳತಕ್ಕದ್ದು.

P.R. 10
SC-250

**ಎನ್. ಎಸ್. ಪ್ರಸನ್ನಕುಮಾರ್**
ಕಾರ್ಯದರ್ಶಿ,
ಕರ್ನಾಟಕ ಲೋಕಸೇವಾ ಆಯೋಗ.

**ನಮೂನೆ 1**

**(ನಿಯಮ–9)**

**ಕರ್ನಾಟಕ ವಿಧಾನಸಭೆ ಸಚಿವಾಲಯ, ಬೆಂಗಳೂರು.**

**ಅಧಿಸೂಚನೆ ದಿನಾಂಕ: 14–12–2016.**

**ಶ್ರೀಮತಿ ವಿ. ಅನಿತ** ದಲಾಯತ್ ಇವರು ಕಾರ್ಯದರ್ಶಿಯವರ ಕಛೇರಿ, ಕರ್ನಾಟಕ ವಿಧಾನಸಭೆ ಸಚಿವಾಲಯ, ಬೆಂಗಳೂರು, ಇಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಇವರ ಹೆಸರನ್ನು **ಅನಿತ** ಎಂಬುದಾಗಿ ಬದಲಾವಣೆಗೆ ಅನುಮತಿ ನೀಡಲಾಗಿದೆ.

**PD C/N 11** **ಕಾರ್ಯದರ್ಶಿ**
**SC - 10** **ಕರ್ನಾಟಕ ವಿಧಾನಸಭೆ ಸಚಿವಾಲಯ.**

**FORM - I**

**(See Rule 9)**

**EDUCATION DEPARTMENT**

**DDPI (SOUTH) BELAGAVI.**

**NOTIFICATION Dated : 09-01-2017.**

Shri. RAMANNA HANUMANTAPPA MUNDINAMANI **working as Education Co-Ordinator in the Education Department of Office of Block Educational Officer City Range, Belagavi is permitted to change his name to** RAMESH HANUMANTAPPA NAYAKA.

**PD C/N 10**
**SC - 10** DDPI (SOUTH) BELAGAVI.

**FORM - I**

**(See Rule 9)**

**OFFICE OF THE COMMISSIONER OF SOCIAL WELFARE DEPARTMENT, BENGALURU.**

**NOTIFICATION Dated : 14-11-2016.**

Shri. Y.P. GUNADHARA **working as Manager in the Social Welfare Department of Office of Asst. Director (Grade-II) Alur Taluk, Hassan Dist. in permitted to change his name to** Y.P. AKASH

**PD C/N 12** COMMISSIONER
**SC - 10** SOCIAL WELFARE DEPARTMENT, BENGALURU.

## IN THE COURT OF THE ADDITIONAL CITY CIVIL JUDGE AT MAYOHALL: BENGALURU CCH-21
## P & SC 25029/2014

**Between**

**SMT. CHANDININ S IYER,**
W/o Late Shivaraman Subramaniya Iyer,
Aged about 55 years,
R/at "Sri. Vaishnavi"
No. 21, SBM Colony, 3rd Main Anand Nagar,
Hebbal, Bengaluru-560 024. **....** **Petitioner**

**AND**

**NIL** **....** **Respondent**

**IN THE MATTER OF PROBATE PERTAINING TO WILL DATED: 15-04-2010.**

**PUBLIC NOTICE**

Whereas, the above named Petitioner has made a petition before the Hon'ble Court (CCH-21) under section 276 of the Indian Succession Act, 1925, praying for issuance of Probate in respect of the estate/property as mentioned below in the schedule so left by her deceased husband Shivaraman Subramaniya Iyer who died on 18-05-2010.

Interested parties are hereby warned to appear in this Court in person or by pleader dully instructed on 23-03-2017, at 11.00 AM, forenoon, to show cause against the petition. Failing wherein, the matter will be heard and determined ex-parte.

**SCHEDULE**

**Item No. 1**

All that piece and parcel of property consisting of a building constructed on building site demarcated as site No. 21, in the layout plan approved by the Bengaluru City Improvement Trust Board (Now Bengaluru Development Authority) relating to the plot of land

measuring 12 acres and 24 guntas and 44 square yards in Survey Number 17 & 18 situated at Hebbal Village, Bengaluru North Taluk, Bengaluru District and the site measuring 50 feet East to West and 40 feet North to South and bounded as follows:

**East by** : 30 feet Road,

**West by** : Site No. 20,

**North by** : 30 feet Road,

**South by** : Site No. 22.

**Item No. 2.**

All that piece and parcel of Katha No. 7115/89, measuring East to West 60 feet and North to South 40 feet, situated at Vinayaka Nagara, Near Railway Station, Malur town bounded on the

**East by** : Bajappa's Land,

**West by** : Road,

**North by** : Site No. 88,

**South by** : Site No. 90.

Given under my sign and seal of the Court on this 25th day January, 2017 at Bengaluru.

**PD 4**
**SC-05**

**By order of the Court**
Assistant Registrar
City Civil Court, Mayo Hall Unit, Bengaluru.

## KARNATAKA PUBLIC SERVICE COMMISSION , 'UDYOGA SOUDHA ' BENGALURU - 1

### NOTIFICATION

**No. PSC 06 RTB-1/2014,Dated : 25/10/2016.**

In pursuance of this Office Notification No. PSC1 RT(4)B-1/2014, dated: 25/09/14,the Final Select List of candidates for 53 (41+12hk)posts of PRINCIPALS IN M D R S in the Department of MINORITIES WELFARE prepared on the basis of Rule 8(2) of Karnataka Civil Services (Direct Recruitment by Competitive Examinations and Selection) (General) Rules 2006 as amended from time to time and amended Rules, 2013, was published vide Notification of even number dated: 06/01/2016, keeping two posts, one under 3A/OTHERS and the other under 3B/OTHERS vacant as per interim orders of the Hon'ble High Court IN W.P.NOs.52454/2015 & 52455/2015(S-RES) dated 10/12/2015. Now as per the Final orders in these Writ Petitions dated:05-07-2016, the selection to the unfilled posts has been finalised and the Revised select is here by published.

**RESIDUAL PARENT CADRE**

| SL.NO | NAME OF THE CANDIDATE | REG.NO. | D_O_B | RESVN. QUALIFICATION | GPERS. |
|---|---|---|---|---|---|
| 1 | VIJAYAKUMAR B K<br>S/O VEERABHADRAPPA B K<br>BEHIND VETERNARY HOSPITAL 2ND CROSS<br>SHIRALAKOPPA SHIKARIPURA TQ<br>SHIVAMOGGA-577428 | 515170 | 28/05/88 | GM/3B/KMS<br>MSc<br>B.Ed | 74.22 |
| 2 | MURALI G<br>KARAMANGALA VILLAGE AND POST<br>BANGARPET TALUK<br>BANGARPET<br>KOLAR-563114 | 113138 | 07/04/83 | GM/CAT1<br>MA (KANNADA)<br>B.Ed | 73.78 |
| 3 | BHAKTHA PRAHALADA K<br>AREHALLI<br>MATHODU POST<br>HOSADURGA TALUK<br>CHITRADURGA-577533 | 122640 | 20/03/85 | GM/CAT1/RL<br>MA (KANNADA)<br>B.Ed | 73.78 |
| 4 | UMESHA K M<br>S/O MARI GOWDA<br>NO 167 SRIRAMA PURA VILLAGE<br>C.H.KATTE POST AND HOBLI K.R.NAGAR TALUK<br>MYSURU-571617 | 410927 | 06/06/83 | GM/3A<br>MSc (MATHS)<br>B.Ed | 72.67 |

| SL.NO | NAME OF THE CANDIDATE | REG.NO. | D_O_B | RESVN. QUALIFICATION | GPERS. |
|---|---|---|---|---|---|
| 5 | KANTHARAJU K<br>GOWNAHALLY AT POST<br>AIMANGALA HOBLI<br>HIRIYUR TQ CHITRADURGA-572144 | 107367 | 15/07/83 | GM/3A/RL<br>MA<br>B.Ed | 72.67 |
| 6 | RAMESH<br>S/O AMALAYYA NANDUR<br>AT POST IJERI<br>TQ JEWARGI<br>KALABURAGI-585310 | 303835 | 01/01/84 | GM/2A/RL<br>MA<br>B.Ed | 72.44 |
| 7 | RAJANNA D S<br>C R P<br>BRC SRINGERI<br>SRINGERI<br>CHIKKMAGALURU-577139 | 512615 | 25/07/75 | GM/3B/RL<br>MA (HISTORY)<br>B.Ed | 71.78 |
| 8 | CHANNAIAH<br>BOMMEGOWDANAKOPPALU VILLAGE<br>MODUR POST BOOKANAKERE HOBLI<br>K R PET TALUK MANDYA-571426 | 417511 | 20/04/76 | GM/2A<br>MA (ECONOMICS)<br>B.Ed | 71.78 |
| 9 | SHEKAR<br>S/O PUTTASIDDACHARI, DO.NO.293.KANAKAGIRI.<br>SEWAGE FARM ROAD. VIDYARANYA PURAM.<br>MYSURU-570008 | 400772 | 08/07/85 | GM/2A<br>MA (KANNADA)<br>B.Ed | 71.33 |
| 10 | MALLESHA E<br>S/O ESHAPPA<br>GUTTINADU VILLAGE INALLI POST<br>CHITRADURGA TQ<br>CHITRADURGA-577502 | 527022 | 10/12/79 | GM/2A/RL<br>MSC<br>B.Ed | 71.11 |
| 11 | SHARANAPPA ANGADI<br>SHARANAPPA ANGADI<br>AT/PO MALLAPUR<br>TQ/ RON<br>GADAG-582209 | 214380 | 30/07/84 | GM/3B<br>M SC (MATHS)<br>B.Ed | 71.11 |
| 12 | GOUSPEER H<br>OPP RAVI TAILOR<br>NEAR NEW WATER TANK GANDHINAGARA<br>CHALLAKERE TOWN<br>CHITRADURGA-577522 | 119573 | 06/03/89 | 2B<br>MSC<br>B.Ed | 70.89 |
| 13 | MADHUKUMAR P<br>S/O PUTTASWAMY S<br>MARIYALA VILLAGE AND POST<br>CHAMARAJANAGAR<br>CHAMARAJANAGAR-571313 | 415663 | 10/05/85 | 3B<br>MA<br>B.Ed | 70.67 |
| 14 | GOVINDARAJU N<br>INOREGOLLAHALLI VILLAGE AND POST<br>UYYAMBALLI HOBLI<br>KANAKAPURA TALUK<br>RAMANAGARA-562119 | 115542 | 20/10/82 | SC/RL<br>M A (KANNADA)<br>B.Ed | 70.44 |

| SL.NO | NAME OF THE CANDIDATE | REG.NO. | D_O_B | RESVN.<br>QUALIFICATION | GPERS. |
|---|---|---|---|---|---|
| 15 | NAGESHA G N<br>S/O NAGARAJU G M<br>GOWDANAHALLI NELAHAL POST<br>BELLAVI HOBLI TUMKURU TALUK<br>TUMAKURU-572128 | 117307 | 20/07/79 | C1<br>MA (ENGLISH)<br>B.Ed | 70.22 |
| 16 | VISHWANATH HULASADAR<br>VISHWANATH GOVIND HULASADAR<br>AT/PO/ RADDERATTI<br>TQ/ ATHANI<br>BELAGAVI-591240 | 236225 | 01/06/84 | 3A<br>MA<br>B.Ed | 70.00 |
| 17 | PAVITRA NAGANAGOUDRA<br>W/o VENKANAGOUDA I BHARAMAGOUDRA<br>AT POST HIREKOPPA<br>TQ NARGUND<br>GADAG-582207 | 220226 | 01/06/83 | GM/3A/W<br>MA<br>B.Ed | 69.78 |
| 18 | PRASHANT PUJARI<br>AT/POST SEGUNASI<br>TQ VIJAYAPURA<br>DIST VIJAYAPURA<br>VIJAYAPURA-586125 | 306677 | 01/10/86 | 2A/RL<br>MA<br>B.Ed | 69.78 |
| 19 | MARULASIDDESHWARA R<br>S/O RANGAPPA N<br>BEERENAHALLY post<br>HIRIYUR TQ<br>CHITRADURGA-577599 | 103420 | 25/06/88 | SC/RL<br>MA (HISTORY)<br>B.Ed | 69.56 |
| 20 | RANGAHANUMAIAH N K<br>NANDI HALLI<br>HIREHALLI POST<br>TUMAKURU TALUK<br>TUMKURU-572168 | 118861 | 01/07/78 | GM/3A/PH-LOCO<br>MA<br>B.Ed | 68.89 |
| 21 | MAHADEVA K N<br>KURUBAHALLI VILLAGE<br>ANKANAHALLI POST MIRLE HOBLI<br>K R NAGAR TQ MYSURU-571604 | 408337 | 02/12/85 | 2A/RL<br>M A<br>B.Ed | 68.89 |
| 22 | TAVAREPPA LAMANI<br>AT JANAGUNDIKOPPA PO BELAGALPET<br>TQ HANGAL<br>HAVERI-581127 | 206214 | 01/06/80 | SC<br>MA<br>B.Ed | 68.44 |
| 23 | MAHABALESHWARA NAIK<br>GANGADHAR NAGAR NOOLVI<br>POST NOOLVI<br>TQ HUBBALLI<br>DHARWAD-580028 | 207150 | 01/06/76 | 2A<br>M A<br>B.Ed | 68.22 |
| 24 | RAMASWAMY K<br>S/O KYASAIAH<br>NALAGETHANAHATTY POST<br>CHALLAKERE TALUK<br>CHITRADURGA-577536 | 501515 | 02/03/81 | SC<br>M A (HISTORY)<br>B.Ed | 68.22 |

| SL.NO | NAME OF THE CANDIDATE | REG.NO. | D_O_B | RESVN.<br>QUALIFICATION | GPERS. |
|---|---|---|---|---|---|
| 25 | KUMARI A<br>KADUVINAHOSAHALLI VILLAGE AND POST<br>ARKALAGUD TQ<br>KONANUR HOBLI<br>HASSAN-573130 | 413193 | 05/04/82 | GM/W<br>M A (KANNADA)<br>B.Ed | 68.22 |
| 26 | RAJESHWARI KATE<br>D/O MALAKAPPA KATE<br>NEW BUS STOP TIKOTA<br>TQ VIJAYAPURA<br>VIJAYAPURA-586130 | 235705 | 15/07/81 | GM/CAT1/W<br>M A (HISTORY)<br>B.Ed | 67.11 |
| 27 | MANJULA E<br>D/O EERABASAPPA C<br>RATHNASHREE NILAYA ASHOK NAGARA<br>2ND MAIN 3RD CROSS SHIVAMOGGA<br>SHIVAMOGGA-577201 | 511518 | 05/08/84 | GM/2A/W<br>MA<br>B.Ed | 67.11 |
| 28 | LATHADEVI T C<br>W/O SHIVANNA<br># 147 NEAR AMBEDKAR BHAVANA<br>SINDHUVALLI VILLAGE AND POST<br>MYSURU TALUK AND MYSURU DISTRICT<br>MYSURU-571311 | 401308 | 01/07/78 | GM/SC/W<br>M A<br>B.Ed | 66.44 |
| 29 | MAMATHA<br>KUDLAPURA VILLAGE AND POST<br>NANJNGUD TALUK<br>NANJANGUD MYSURU-571301 | 411372 | 10/05/81 | GM/CAT1/W<br>M A (HISTORY)<br>B.Ed | 66.44 |
| 30 | KASHINATHA K<br>S/O SHIVAPPA K<br>AT POST SOVENAHALLI<br>TQ HUVINAHADAGALI<br>BALLARI-583214 | 211281 | 22/07/81 | ST<br>MA<br>B.Ed | 66.44 |
| 31 | CHANDRAMMA G N<br>D/O LATE NANJANAYAKA<br>GANIGANUR VILLAGE AND POST<br>YELANDUR TALUK<br>CHAMARAJANAGAR-571441 | 404075 | 09/05/77 | ST/W<br>M.A<br>B.Ed | 65.56 |
| 32 | BHARATHI K<br>W/O CHANDRASHEKARA J N<br>J C PURA VILLAGE AND POST<br>ARSIKERE TQ<br>HASSAN-573126 | 417615 | 04/06/84 | 2A/W<br>M A (KANNADA)<br>B.Ed | 64.00 |
| 33 | SHILPA K M<br>KAMENAHALLI VILLAGE<br>HOSURU KALLAHALLI VILLAGE<br>K R NAGARA TALUK<br>MYSURU-571602 | 416977 | 13/05/86 | SC/W<br>M Sc<br>B.Ed | 64.00 |
| 34 | MANJULA CHALAWADI<br>AT PO BENAKATTI<br>BAGALKOT<br>BAGALKOT-587101 | 211518 | 01/06/84 | SC/W<br>MA<br>B.Ed | 63.78 |

| SL.NO | NAME OF THE CANDIDATE | REG.NO. | D_O_B | RESVN. QUALIFICATION | GPERS. |
|---|---|---|---|---|---|
| 35 | RASHMI GURAV<br>RASHMI ASHOK GURAV<br>AT POST NADI INGALGAON<br>TQ ATHANI<br>BELAGAVI-591304 | 230812 | 25/06/88 | 2A/W<br>M SC (BOTANY)<br>B.Ed | 63.78 |
| 36 | REKHA BARKI<br>S/O NINGAPPA BARKI<br>AT.POST TALLUR<br>TQ SAVADATTI<br>BELAGAVI-591117 | 226775 | 01/06/84 | C1/W<br>MA<br>B.Ed | 63.56 |
| 37 | ASIFA<br>NO 26/407 MUMTAZ MANZIL<br>SIDDARTHANAGAR<br>CHAMARAJANAGAR<br>CHAMARAJANAGAR-571313 | 417578 | 21/02/80 | 2B/W<br>MA (GEOGRAPHY)<br>B.Ed | 63.33 |
| 38 | VEERESHA<br>5TH WARD<br>AMBEDKAR NAGARA KAMALAPUR POST<br>HOSPET BALLARI-583221 | 225305 | 01/06/81 | SC/PH-LOCO<br>M A (KANNADA)<br>B.Ed | 60.22 |
| 39 | BASAPPA<br>BASAPPA M BARKI<br>AT POST YALAGACH<br>TQ HAVERI HAVERI-581213 | 208683 | 21/07/76 | GM/CAT1/XMP<br>M A<br>B.Ed | 47.33 |
| 40 | SIDDAPPA<br>SIDDAPPA B KARIMUNGI<br>AT POST GUBBEWAD<br>TQ SINDAGI<br>VIJAYAPURA-586128 | 302744 | 01/06/76 | GM/XMP<br>MA<br>B.Ed | 44.89 |

**HYDERABAD - KARNATAKA**

| SL.NO | NAME OF THE CANDIDATE | REG.NO. | D_O_B | RESVN. QUALIFICATION | GPERS. |
|---|---|---|---|---|---|
| 1 | JATTEPPA<br>S/O CHANDAPPA TALWAR<br>AT POST HADANOOR<br>SHORAPUR YADGIR-585216 | 301919 | 01/08/75 | GM/CAT1/PH-LOCO/HK<br>MA (HISTORY)<br>B.Ed | 85.67 |
| 2 | YELLAPPA<br>BHEMAPPA AT POST KONGANDI S R<br>SHAHAPUR DIST YADGIR<br>PIN -585304<br>YADGIR-585304 | 316203 | 01/08/87 | GM/SC/HK<br>M A<br>B.Ed | 71.33 |
| 3 | MALLIKARJUN<br>S/O SHARANAPPA PUTGAL<br>BASANTAPUR<br>POST MOLEKERA BIDAR-585330 | 207245 | 25/07/87 | GM/3A/RL/HK<br>M A (KANNADA)<br>B.Ed | 70.67 |
| 4 | VENKATESHA<br>S/O MANAPPA NAYAK<br>SMV NAGARA NEAR WATER TANK<br>TAVARAGERA TQ. KUSHTAGI<br>KOPPAL-583279 | 319100 | 10/08/78 | GM/ST/RL/HK<br>MA<br>B.Ed | 69.56 |

| SL.NO | NAME OF THE CANDIDATE | REG.NO. | D_O_B | RESVN. QUALIFICATION | GPERS. |
|---|---|---|---|---|---|
| 5 | SHASHIDHARA VISHWANATHA SONARKARA<br>H.NO.129 EWS<br>NEAR POLICE QURTS<br>SHANTI NAGAR KALABURAGI<br>KALABURAGI-585103 | 308497 | 02/01/87 | 2A/HK<br>M A (HISTORY)<br>B.Ed | 69.33 |
| 6 | PARASHURAM<br>S/O HULAGAPPA TALEWAD<br># SR/5 KEMBAVI CROSS HUNASAGI<br>TQ-SHORAPUR<br>YADGIR-585215 | 228608 | 05/03/89 | C1/HK<br>M SC (MATHS)<br>B.Ed | 68.67 |
| 7 | RAJAKUMAR<br>AT POST BIDNOOR<br>TQ AFZALPUR<br>DIST KALABURAGI<br>KALABURAGI-585265 | 302357 | 27/07/84 | SC/HK<br>MA<br>B.Ed | 67.33 |
| 8 | MANJUNATH<br>MANJUNATH VENKAPPA DANAPUR<br>AT POST. TURAVIHAL<br>TQ. SINDHANUR<br>RAICHUR-584132 | 226322 | 15/01/88 | ST/HK<br>MSc (PHYSICS)<br>B.Ed | 67.11 |
| 9 | YASHODA HOSUR<br>G L P SCHOOL 17 TH WARD<br>CHALUVADI KERI<br>HOSPET BALLARI-583201 | 221198 | 02/06/81 | GM/W/HK<br>M A (KANNADA)<br>B.Ed | 64.67 |
| 10 | AMBIKA<br>C/O SANJEEV KUMAR CHALWA<br>AT POST JANWADA<br>BIDAR-585402 | 308858 | 21/01/89 | GM/3B/W/HK<br>MSC<br>B.Ed | 64.00 |
| 11 | ALICHAND<br>S/O USMANSAB<br>AT/PO ARASHANAGI<br>TQ/ RAICHUR<br>RAICHUR-584113 | 214888 | 08/08/84 | 2B/HK<br>M SC (MATHS)<br>B.Ed | 62.00 |
| 12 | RAJESWARI<br>PLOT NO 56<br>BHAGYA NAGAR<br>SEDAM ROAD<br>KALABURAGI-585106 | 312645 | 08/10/76 | SC/W/HK<br>MA (SOCIOLOGY)<br>B.Ed | 61.11 |

**NOTE:** THE SELECTION OF ABOVE CANDIDATES IS SUBJECT TO THE FINAL DECISION OF HON'BLE KAT IN APPLN.NO.8368-579/2014, 8683-693/2014, 9027-092/2014, 9461-473/2014 AND HON'BLE HIGH COURT IN W.P.No.108694-698/2015.

**PR-205**
**SC-25**

**SUBODH YADAV I.A.S,**
**Secretary,**
**Karnataka Public Service Commission.**

## ಕೃಷಿ ಇಲಾಖೆ

## ಕೃಷಿ ಆಯುಕ್ತರ ಕಛೇರಿ, ಶೇಷಾದ್ರಿ ರಸ್ತೆ, ಬೆಂಗಳೂರು–1.

## ಅಧಿಸೂಚನೆ

**ಸಂಖ್ಯೆ: ಕೃಸಿಪ–2/ವಿವ–105/2016–17, ಬೆಂಗಳೂರು, ದಿನಾಂಕ : 09/02/2017.**

1. ಸರ್ಕಾರದ ಅಧಿಸೂಚನೆ ಸಂಖ್ಯೆ:ಎಜಿಡಿ/28/ಎಎನ್ಇ/2015 ದಿನಾಂಕ:19.11.2016ರ ಕರ್ನಾಟಕ ಕೃಷಿ ಸೇವೆಗಳು (ಸಹಾಯಕ ಕೃಷಿ ನಿರ್ದೇಶಕರು, ಕೃಷಿ ಅಧಿಕಾರಿ ಮತ್ತು ಸಹಾಯಕ ಕೃಷಿ ಅಧಿಕಾರಿಗಳ ನೇಮಕಾತಿ) (ವಿಶೇಷ) ನಿಯಮಗಳು–2016 ರನ್ವಯ ಹಾಗೂ ಸರ್ಕಾರದ ಪತ್ರ ಸಂಖ್ಯೆ: ಕೃಇ 172 ಕೃಪಸೇ 2011 ದಿನಾಂಕ:20.02.2015 ಮತ್ತು ದಿನಾಂಕ:14.01.2016ರಲ್ಲಿ ನೀಡಿರುವ ಅನುಮತಿಯಂತೆ ಅಧಿಸೂಚನೆಯಲ್ಲಿ ನಮೂದಿಸಿರುವ ಕೃಷಿ ಇಲಾಖೆಯಲ್ಲಿ ಖಾಲಿ ಇರುವ ಈ ಕೆಳಕಂಡ ಗ್ರೂಪ್–ಎ ಮತ್ತು ಗ್ರೂಪ್–ಬಿ ಹುದ್ದೆಗಳನ್ನು ಭರ್ತಿ ಮಾಡಲು ಅರ್ಹ ಅಭ್ಯರ್ಥಿಗಳಿಂದ ಆನ್‌ಲೈನ್ ಮೂಲಕ ಅರ್ಜಿಗಳನ್ನು ಆಹ್ವಾನಿಸಿದೆ.

In case of any discrepancy/ambiguity arise with regard to any of the above prescribed rules/procedures, Karnataka Civil Services(General Recruitment) Rules, 1977 and its amendment rules shall prevail.

| ಕ್ರ.ಸಂ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| | | ಉಳಿಕೆ ಮೂಲ ವೃಂದದ ಹುದ್ದೆಗಳು |
| | **ಗ್ರೂಪ್–'ಎ' ಹುದ್ದೆಗಳು** | |
| 1. | **ಸಹಾಯಕ ಕೃಷಿ ನಿರ್ದೇಶಕರು** | **53** |
| | **ಗ್ರೂಪ್–'ಬಿ' ಹುದ್ದೆಗಳು** | |
| 2. | **ಕೃಷಿ ಅಧಿಕಾರಿ** | **300** |
| 3. | **ಸಹಾಯಕ ಕೃಷಿ ಅಧಿಕಾರಿ** | **43** |
| | **ಒಟ್ಟು** | **396** |

**ಟಿಪ್ಪಣಿ:–** ಮೇಲೆ ತಿಳಿಸಿರುವ ಹುದ್ದೆಗಳ ಸಂಖ್ಯೆ ಮತ್ತು ಅನುಬಂಧ–4ರಲ್ಲಿ ಹುದ್ದೆಗಳ ವರ್ಗೀಕರಣವು ಸರ್ಕಾರದ ಆದೇಶಗಳು ಮತ್ತು ನಿಯಮಗಳಂತೆ ಬದಲಾವಣೆಗೆ ಒಳಪಟ್ಟಿರುತ್ತದೆ.

1) ಅರ್ಜಿ ಸಲ್ಲಿಸಲು ಪ್ರಾರಂಭಿಕ ದಿನಾಂಕ: 10.02.2017
2) ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ: 09.03.2017
3) ಅರ್ಜಿ ಶುಲ್ಕವನ್ನು ಪಾವತಿಸಲು ಕೊನೆಯ ದಿನಾಂಕ: 10.03.2017 (ಕೆನರಾ ಬ್ಯಾಂಕ್ ಶಾಖೆಗಳ ಕಾರ್ಯದ ವೇಳೆಯೊಳಗೆ)

**ವಿಶೇಷ ಸೂಚನೆಗಳು :**

- ಒಬ್ಬ ಅಭ್ಯರ್ಥಿಯು ಯಾವುದೇ ಒಂದು ಹುದ್ದೆ ಅಥವಾ ಎಲ್ಲಾ ಹುದ್ದೆಗಳಿಗೆ ಒಂದೇ ಅರ್ಜಿ ಸಲ್ಲಿಸತಕ್ಕದ್ದು.
- ಒಬ್ಬ ಅಭ್ಯರ್ಥಿಯು ಒಂದಕ್ಕಿಂತ ಹೆಚ್ಚು ಹುದ್ದೆಗಳಿಗೆ ಅರ್ಜಿ ಸಲ್ಲಿಸಿದ್ದಲ್ಲಿ ಪ್ರತಿ ಹುದ್ದೆಗೂ ಪ್ರತ್ಯೇಕವಾಗಿ ಶುಲ್ಕ ಪಾವತಿಸುವುದು.
- ಅರ್ಜಿಗಳನ್ನು ಆನ್–ಲೈನ್(On-line)(ಎಲೆಕ್ಟ್ರಾನಿಕ್ ಮಾರ್ಗ) ಮುಖಾಂತರ ಮಾತ್ರ ಸಲ್ಲಿಸತಕ್ಕದ್ದು. ಅರ್ಜಿಗಳನ್ನು ಖುದ್ದಾಗಿ ಅಥವಾ ಅಂಚೆ ಮೂಲಕ ಪ್ರತ್ಯೇಕವಾಗಿ ಸಲ್ಲಿಸಲು ಅವಕಾಶವಿರುವುದಿಲ್ಲ.
- ಅಭ್ಯರ್ಥಿಗಳು On-Line ಅರ್ಜಿಯನ್ನು ಭರ್ತಿ ಮಾಡುವ ಮುನ್ನ ಕಡ್ಡಾಯವಾಗಿ ನೀಡಿರುವ ಸೂಚನೆಗಳನ್ನು ಓದಿಕೊಳ್ಳತಕ್ಕದು ಹಾಗೂ ನೀಡಿರುವ ಸೂಚನೆಗಳನ್ವಯ ಅರ್ಜಿಯನ್ನು ಭರ್ತಿ ಮಾಡತಕ್ಕದ್ದು. ತಪ್ಪು ಮಾಹಿತಿಗಳನ್ನು ನೀಡಿ ಅರ್ಜಿ ಸಲ್ಲಿಸಿದಲ್ಲಿ ಅಂತಹವರ ವಿರುದ್ಧ ಇಲಾಖೆಯು ಕಾನೂನಿನನ್ವಯ ಸೂಕ್ತ ಕ್ರಮ ಕೈಗೊಳ್ಳಲಾಗುವುದು.

ಅರ್ಜಿಯಲ್ಲಿ ಮೀಸಲಾತಿಗೆ ಸಂಬಂಧಿಸಿದ ಅಂಕಣದಲ್ಲಿ ಉಪಯೋಗಿಸಿದ ಪದಗಳ ಅರ್ಥವನ್ನು ಈ ಕೆಳಕಂಡಂತೆ ಅರ್ಥೈಸಿಕೊಳ್ಳಬೇಕು.

| | | | |
|---|---|---|---|
| ಸಾ.ಅ | ಸಾಮಾನ್ಯ ಅರ್ಹತೆ | GM | General Merit |
| ಪ.ಜಾ | ಪರಿಶಿಷ್ಟ ಜಾತಿ | SC | Scheduled Caste |
| ಪ.ಪಂ | ಪರಿಶಿಷ್ಟ ಪಂಗಡ | ST | Scheduled Tribe |
| ಪ್ರ–1 | ಪ್ರವರ್ಗ–1 | Cat-1 | Category-1 |
| 2ಎ | ಪ್ರವರ್ಗ–2ಎ | 2A | Category-2A |
| 2ಬಿ | ಪ್ರವರ್ಗ–2ಬಿ | 2B | Category-2B |
| 3ಎ | ಪ್ರವರ್ಗ–3ಎ | 3A | Category-3A |
| 3ಬಿ | ಪ್ರವರ್ಗ–3ಬಿ | 3B | Category-3B |
| ಮಾ.ಸೈ | ಮಾಜಿ ಸೈನಿಕ | Ex-MP | Ex-Military Person |
| ಗ್ರಾಮೀಣ | ಗ್ರಾಮೀಣ ಅಭ್ಯರ್ಥಿ | Rural | Rural Candidate |

| | | | |
|---|---|---|---|
| ಕ.ಮಾ.ಅ | ಕನ್ನಡ ಮಾಧ್ಯಮ ಅಭ್ಯರ್ಥಿ | KMS | Kannada Medium Student |
| ಅಂ.ವಿ | ಅಂಗವಿಕಲ | PH | Physically Handicapped Person |
| ಹೈ.ಕ | ಹೈದ್ರಾಬಾದ್-ಕರ್ನಾಟಕ | HK | Hyderabad-Karnataka |
| ಉ.ಮೂ.ವೃ | ಉಳಿದ ಮೂಲ ವೃಂದ | RPC | Residual Parent Cadre |

**2. ಶುಲ್ಕ :**

| | |
|---|---|
| ಸಾಮಾನ್ಯ ಅರ್ಹತೆಯ ಅಭ್ಯರ್ಥಿಗಳಿಗೆ | **₹. 300/-** |
| ಪ್ರವರ್ಗ 2(ಎ), 2(ಬಿ), 3(ಎ), 3(ಬಿ) ಗೆ ಸೇರಿದ ಅಭ್ಯರ್ಥಿಗಳಿಗೆ | **₹. 150/-** |
| ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ-1, ಅಂಗವಿಕಲ ಮತ್ತು ಮಾಜಿ ಸೈನಿಕ ಅಭ್ಯರ್ಥಿಗಳಿಗೆ | **ಶುಲ್ಕ ಇಲ್ಲ** |

**2.1.** ಅರ್ಜಿಗಳನ್ನು ON LINE ಮೂಲಕ ಭರ್ತಿ ಮಾಡಿ ನಿಗದಿತ ಶುಲ್ಕವನ್ನು ಕೆನರಾ ಬ್ಯಾಂಕ್‌ನ ಕೆಲಸದ ವೇಳೆಯೊಳಗೆ ಯಾವುದೇ ಶಾಖೆಗಳಲ್ಲಿ (e- Challan ಮೂಲಕ) ಪಾವತಿ ಮಾಡಬಹುದು. ಇದನ್ನು ಹೊರತುಪಡಿಸಿ ಬೇರೆ ಯಾವುದೇ ಮಾದರಿಯಲ್ಲಿ ಪಾವತಿಸಿರುವ ಶುಲ್ಕವನ್ನು ಸ್ವೀಕರಿಸಲಾಗುವುದಿಲ್ಲ. ಒಮ್ಮೆ ಶುಲ್ಕವನ್ನು ಪಾವತಿಸಿದ ನಂತರ ಅದನ್ನು ಯಾವುದೇ ಸಂದರ್ಭದಲ್ಲೂ ಹಿಂತಿರುಗಿಸಲಾಗುವುದಿಲ್ಲ. ನಿಗದಿತ ಶುಲ್ಕ ಪಾವತಿಸದ ಅಭ್ಯರ್ಥಿಗಳ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

**3.** ಅಭ್ಯರ್ಥಿಗಳು ONLINE ಮೂಲಕ ಅರ್ಜಿ ಭರ್ತಿ ಮಾಡುವ ಮೊದಲು ಕೆಳಕಂಡ ಸೂಚನೆಗಳನ್ನು ಕಡ್ಡಾಯವಾಗಿ ತಿಳಿದುಕೊಳ್ಳತಕ್ಕದ್ದು.

**ಹಂತ 1 :-** ಅಭ್ಯರ್ಥಿಗಳು ಇಲಾಖೆಯ ಅಧಿಕೃತ ವೆಬ್‌ಸೈಟ್ **"http://raitamitra.kar.nic.in"** ನ ತೆರೆದ ಕೂಡಲೇ ಕಂಪ್ಯೂಟರ್ ಪರದೆಯ ಮೇಲೆ **"ON-LINE APPLICATION FOR ADA/AO/AAO"** ಎಂದು ಮೂಡುತ್ತದೆ. ಅದರ ಮೇಲೆ ಕ್ಲಿಕ್ ಮಾಡಿದ ಕೂಡಲೇ **Registration** ಪರದೆ ತೆರೆದುಕೊಳ್ಳುತ್ತದೆ.

**ಹಂತ 2 :-** Click on Register button ಒತ್ತಿ, **Registration** ಪರದೆಯ ಮೇಲೆ ಅಗತ್ಯ ಮಾಹಿತಿಯನ್ನು ಅಂದರೆ ಹೆಸರು, ತಂದೆ, ತಾಯಿಯ ಹೆಸರು, ಜನ್ಮ ದಿನಾಂಕ ಮತ್ತು ಮೊಬೈಲ್ ಸಂಖ್ಯೆ ಕಡ್ಡಾಯವಾಗಿ ನಮೂದಿಸತಕ್ಕದ್ದು. ಈ ಎಲ್ಲಾ ಮಾಹಿತಿಯನ್ನು ಸರಿಯಾಗಿ ಭರ್ತಿ ಮಾಡಿದ ನಂತರ Submit Button ಅನ್ನು ಒತ್ತಬೇಕು. ಆಗ ನಿಮಗೆ Login ID ಮತ್ತು Password ಅನ್ನು ನಿಮ್ಮ ಮೊಬೈಲ್ ಸಂಖ್ಯೆಗೆ ರವಾನಿಸಲಾಗುತ್ತದೆ. ಅಭ್ಯರ್ಥಿಯು ಮೊಬೈಲ್ ನಂಬರ್ ನೇಮಕಾತಿ ಮುಗಿಯುವವರೆಗೂ ಬದಲಾಯಿಸತಕ್ಕದ್ದಲ್ಲ.

**ಹಂತ 3 :-** ನಿಮಗೆ ನೀಡಲಾದ Login ID ಮತ್ತು Password ನ್ನು ಉಪಯೋಗಿಸಿ Login Button ಒತ್ತಿದಲ್ಲಿ APPLICATION ಮೂಡುತ್ತದೆ. ಇದರಲ್ಲಿ Candidate Details/Qualification Details/Examination Center Details/Photo uploading ಗಳಿರುತ್ತವೆ. ಈ ಪುಟದಲ್ಲಿ ಪರೀಕ್ಷಾ ಕೇಂದ್ರವನ್ನು ಆಯ್ಕೆಮಾಡುವ ಮತ್ತು ಕಡ್ಡಾಯ ಕನ್ನಡ ಭಾಷಾ ಪರೀಕ್ಷೆಯ ವಿವರಗಳು ಮೂಡಲಿದ್ದು ನೀವು ಬಯಸುವ ಪರೀಕ್ಷಾ ಕೇಂದ್ರವನ್ನು ಆಯ್ಕೆ ಮಾಡತಕ್ಕದ್ದು(ಪರೀಕ್ಷಾ ಕೇಂದ್ರಗಳನ್ನು ಅನುಬಂಧ-1ರಲ್ಲಿ ನೋಡತಕ್ಕದ್ದು) ಹಾಗೂ ಕನ್ನಡ ಉತ್ತೀರ್ಣತೆಯ ವಿವರಗಳನ್ನು ಕಡ್ಡಾಯವಾಗಿ ನಮೂದಿಸತಕ್ಕದ್ದು. **ಕಡ್ಡಾಯ ಕನ್ನಡ ಭಾಷೆ ಪರೀಕ್ಷೆ ತೆಗೆದುಕೊಳ್ಳುವ ಅಭ್ಯರ್ಥಿಗಳು ಕನ್ನಡ ಭಾಷೆ ಪರೀಕ್ಷೆ ಮತ್ತು ಸ್ಪರ್ಧಾತ್ಮಕ ಪರೀಕ್ಷೆಗೆ ಬೆಂಗಳೂರು ಕೇಂದ್ರವನ್ನು ಮಾತ್ರ ಆಯ್ಕೆ ಮಾಡಿಕೊಳ್ಳತಕ್ಕದ್ದು.** ತದನಂತರ ನೀವು ಸ್ಕ್ಯಾನ್ ಮಾಡಿಕೊಂಡಿರುವ ಇತ್ತೀಚಿನ ಭಾವಚಿತ್ರ, ಸಹಿ ಹಾಗೂ ನಿಮ್ಮ ಎಡಗೈ ಹೆಬ್ಬೆಟ್ಟಿನ ಗುರುತನ್ನೂ ಸಹ ಅಪ್ ಲೋಡ್ ಮಾಡತಕ್ಕದ್ದು. ಈ ಅರ್ಜಿ ನಮೂನೆಯಲ್ಲಿ ಅಭ್ಯರ್ಥಿಗಳಿಗೆ ಸಂಬಂಧಪಟ್ಟ ಪೂರ್ಣ ವಿವರಗಳನ್ನು ಜಾಗರೂಕತೆಯಿಂದ ಭರ್ತಿ ಮಾಡತಕ್ಕದ್ದು. ಇದಾದ ನಂತರ ಅಂತಿಮವಾಗಿ Final Submit Button ಒತ್ತುವುದು.

**ಸೂಚನೆ :- Final Submit Button** ಅನ್ನು ಒತ್ತಿದ ನಂತರ ಅರ್ಜಿಯಲ್ಲಿ ಯಾವುದೇ ತಿದ್ದುಪಡಿಗಳನ್ನು ಮಾಡಲು ಅವಕಾಶ ಇರುವುದಿಲ್ಲ.

**ಭಾವಚಿತ್ರ, ಸಹಿ ಮತ್ತು ದಾಖಲೆಗಳ ಅಪ್ಲೋಡ್ :-** ಭಾವಚಿತ್ರ ಮತ್ತು ಸಹಿಯನ್ನು ಜೆಪಿಜಿ/ ಜೆಪಿಇಜಿ(JPG/JPEG) ಮಾದರಿಯಲ್ಲಿಯೇ ಅಪ್ಲೋಡ್ ಮಾಡಬೇಕು.

**ಭಾವಚಿತ್ರದ ಅಳತೆ :-** 3.5 cm x 4.5 cm (10 KB ರಿಂದ 150 KB ಇರತಕ್ಕದ್ದು)

**ಸಹಿಯ ಅಳತೆ :-** 3.5 cm x 1.5 cm (10 KB ರಿಂದ 150 KB ಇರತಕ್ಕದ್ದು)

**ಹೆಬ್ಬೆಟ್ಟಿನ ಗುರುತಿನ ಅಳತೆ :-** 3.5 cm x 1.5 cm Pixel (10 KB ರಿಂದ 150 KB ಇರತಕ್ಕದ್ದು)

**ಭಾವಚಿತ್ರವನ್ನು ಸ್ಕ್ಯಾನ್ ಮಾಡುವ ಮಾರ್ಗಸೂಚಿಗಳು :-**ಭಾವಚಿತ್ರ (ಜೆಪಿಜಿ/ಜೆಪಿಇಜಿ (JPG/JPEG) ಮಾದರಿಯಲ್ಲಿ ಮಾತ್ರ ಇರಬೇಕು)

ಬಿಳಿ ಅಥವಾ ತಿಳಿ ಬಣ್ಣದ ಹಾಳೆಯಲ್ಲಿ ಇತ್ತೀಚಿನ ಪಾಸ್‌ಪೋರ್ಟ್ ಅಳತೆಯ ಭಾವಚಿತ್ರವನ್ನು ಅಂಟಿಸಿ ಸ್ಕ್ಯಾನ್ ಮಾಡತಕ್ಕದ್ದು. ಕನ್ನಡಕ ಉಪಯೋಗಿಸಿದ್ದಲ್ಲಿ ನಿಮ್ಮ ಕಣ್ಣುಗಳು ಸರಿಯಾಗಿ ಕಾಣುತ್ತಿರುವುದನ್ನು ಖಚಿತಪಡಿಸಿಕೊಳ್ಳಿ. ಟೋಪಿ ಅಥವಾ ಕಪ್ಪು ಕನ್ನಡಕ ಧರಿಸಿ ತೆಗೆದ ಭಾವಚಿತ್ರಗಳನ್ನು ಅನುಮತಿಸುವುದಿಲ್ಲ. ಧಾರ್ಮಿಕ ತಲೆ-ಉಡುಪು ಧರಿಸಬಹುದು ಆದರೆ ಇದು ಮುಖವನ್ನು ಮರೆಮಾಚುವಂತೆ ಇರಬಾರದು. ಈ ಮೇಲಿನ ಸೂಚನೆಗಳಂತೆ ಭಾವಚಿತ್ರವನ್ನು ಅಪ್ಲೋಡ್ ಮಾಡುವುದು.

**ಹಂತ-4 :- Final Submit button** ಒತ್ತಿದ ನಂತರ **Download e-Challan Button** ಮೂಡುತ್ತವೆ. **Download e-Challan Button** ಅನ್ನು ಒತ್ತಿದ್ದಲ್ಲಿ ಶುಲ್ಕ ಪಾವತಿಸಲು ಪರದೆಯ ಮೇಲೆ ತ್ರಿಪ್ರತಿಯಲ್ಲಿ ಚಲನ್ ಮೂಡಲಿದ್ದು. **Challan Download** ಮಾಡಿಕೊಂಡು ಯಾವುದೇ ಕೆನರಾ ಬ್ಯಾಂಕ್‌ನ ಶಾಖೆಗಳಲ್ಲಿ ನಿಗದಿತ ಅರ್ಜಿ ಶುಲ್ಕವನ್ನು ಪಾವತಿ ಮಾಡುವುದು.

**Note :-** ಶುಲ್ಕವನ್ನು ಪಾವತಿಸಲು ನಿಗದಿಪಡಿಸಿದ ಕೊನೆಯ ದಿನಾಂಕ: 10.03.2017 (ಕೆನರಾ ಬ್ಯಾಂಕ್ ಶಾಖೆಗಳ ಕಾರ್ಯದ ವೇಳೆಯೊಳಗೆ) ನಂತರ ಶುಲ್ಕವನ್ನು ಸಂದಾಯ ಮಾಡಲು ಅವಕಾಶವಿರುವುದಿಲ್ಲ.

**ಹಂತ-5 :-** ಕೆನರಾ ಬ್ಯಾಂಕ್‌ನ ಶಾಖೆಯಲ್ಲಿ ಶುಲ್ಕ ಪಾವತಿಯ ಬಗ್ಗೆ ದೃಢೀಕರಣವಾದ ನಂತರವೇ ಇಲಾಖಾ ವೆಬ್‌ಸೈಟ್‌ನಲ್ಲಿ **Download Application Button** ಮೂಡುತ್ತದೆ. ಆದ್ದರಿಂದ ಅಭ್ಯರ್ಥಿಗಳು ಶುಲ್ಕ ಪಾವತಿಸಿದ ನಂತರ ಮತ್ತೆ ಇಲಾಖಾ ವೆಬ್‌ಸೈಟ್‌ಗೆ ತಮಗೆ ನೀಡಿರುವ **Login ID**

ಉಪಯೋಗಿಸಿಕೊಂಡು **Login** ಆಗಿ **Download Application Button** ಒತ್ತಿದಲ್ಲಿ **Application** ಮೂಡುತ್ತದೆ. **Application** ನನ್ನು **Download** ಮಾಡಿಕೊಂಡು ನೇಮಕಾತಿ ಪ್ರಕ್ರಿಯೆ ಮುಕ್ತಾಯವಾಗುವವರೆಗೂ ಅಭ್ಯರ್ಥಿಗಳು ತಮ್ಮ ಬಳಿ ಇಟ್ಟುಕೊಳ್ಳತಕ್ಕದ್ದು.

**ಹಂತ–6 :–** ಕ್ರಮಬದ್ಧವಾಗಿ ಅರ್ಜಿಯನ್ನು ಸಲ್ಲಿಸಿದ ಅಭ್ಯರ್ಥಿಗಳ ಮೊಬೈಲ್ ಸಂಖ್ಯೆಗೆ ಅರ್ಜಿ ಸ್ವೀಕೃತಿಯ ಮಾಹಿತಿಯನ್ನು ಕಳುಹಿಸಲಾಗುವುದು.

**ಹಂತ–7 :– On–line** ಮೂಲಕ ಅರ್ಜಿಯನ್ನು ಭರ್ತಿಮಾಡುವ ಸಂದರ್ಭದಲ್ಲಿ ಯಾವುದಾದರೂ ತಾಂತ್ರಿಕ ತೊಂದರೆ ಅಥವಾ ಸಮಸ್ಯೆ ಎದುರಾದಲ್ಲಿ ಸಹಾಯವಾಣಿ (**Help line**) ಸಂಖ್ಯೆ 080–22074138 ಅನ್ನು (ಬೆಳಿಗ್ಗೆ 10–00 ಗಂಟೆಯಿಂದ ಸಂಜೆ 5–30 ಗಂಟೆಯವರೆಗೆ ಅಥವಾ ಅರ್ಜಿಯಲ್ಲಿ ನೀಡಿರುವ ಇ–ಮೇಲ್ ಸಹಾಯ ಮೂಲಕ) ಸಂಪರ್ಕಿಸಿ ಅಗತ್ಯ ಮಾಹಿತಿ ಪಡೆದು ಅರ್ಜಿ ಸಲ್ಲಿಸಬಹುದು.

**3.1** ಅಭ್ಯರ್ಥಿಗಳು ಅರ್ಜಿಯಲ್ಲಿ ತಮ್ಮ ಮಿಂಚಂಚೆ (ಇ–ಮೇಲ್) ಮತ್ತು ಮೊಬೈಲ್ ಸಂಖ್ಯೆ ಕಡ್ಡಾಯವಾಗಿ ನಮೂದಿಸತಕ್ಕದ್ದು.

**3.2** ಅಭ್ಯರ್ಥಿಗಳು ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದವರೆಗೂ ವಿಳಂಬ ಮಾಡದೆ ಮುಂಚಿತವಾಗಿ ಅರ್ಜಿಗಳನ್ನು ಸಲ್ಲಿಸತಕ್ಕದ್ದು.

**3.3** ಶುಲ್ಕವನ್ನು ಪಾವತಿಸಲು ನಿಗದಿಪಡಿಸಿದ ಕೊನೆಯ ದಿನಾಂಕ/ಸಮಯದ ನಂತರ ಶುಲ್ಕವನ್ನು ಸಂದಾಯ ಮಾಡಲು ಅವಕಾಶವಿರುವುದಿಲ್ಲ.

**4. ಅರ್ಹತಾ ಷರತ್ತುಗಳು :–**

- ➢ ಅಭ್ಯರ್ಥಿಯು ಭಾರತೀಯ ನಾಗರೀಕನಾಗಿರತಕ್ಕದ್ದು.
- ➢ ಒಬ್ಬ ಜೀವಂತ ಪತ್ನಿಗಿಂತ ಹೆಚ್ಚು ಮಂದಿ ಪತ್ನಿಯರನ್ನು ಹೊಂದಿರುವ ಪುರುಷ ಅಭ್ಯರ್ಥಿ ಮತ್ತು ಈಗಾಗಲೇ ಇನ್ನೊಬ್ಬ ಹೆಂಡತಿ ಇರುವ ವ್ಯಕ್ತಿಯನ್ನು ಮದುವೆಯಾಗಿರುವ ಮಹಿಳಾ ಅಭ್ಯರ್ಥಿಯು ಸರ್ಕಾರದಿಂದ ಪೂರ್ವಾನುಮತಿಯನ್ನು ಪಡೆಯದೇ ನೇಮಕಾತಿಗೆ ಅರ್ಹರಾಗುವುದಿಲ್ಲ.
- ➢ ಅಭ್ಯರ್ಥಿಯು ಮಾನಸಿಕವಾಗಿ ಮತ್ತು ದೈಹಿಕವಾಗಿ ಆರೋಗ್ಯವಂತರಾಗಿರಬೇಕು.
- ➢ ದೈಹಿಕವಾಗಿ ಅನರ್ಹರಾಗಿದ್ದಾರೆಂಬುದಾಗಿ ವೈದ್ಯಕೀಯ ಮಂಡಳಿಯ ವರದಿಯ ಮೇಲೆ ಅನರ್ಹರೆಂಬುದಾಗಿ ತಿರಸ್ಕರಿಸುವ ಪೂರ್ಣ ವಿವೇಚನೆಯನ್ನು ರಾಜ್ಯ ಸರ್ಕಾರ/ಆಯ್ಕೆ ಪ್ರಾಧಿಕಾರವು ಕಾಯ್ದಿರಿಸಿಕೊಂಡಿದೆ ಮತ್ತು ಸರ್ಕಾರದ ವಿವೇಚನೆಯು ಯಾವುದೇ ವಿಧದಲ್ಲೂ ಈ ನಿಯಮಗಳ ಮೂಲಕ ಸೀಮಿತವಾಗಿರುವುದಿಲ್ಲ.

ನಿಗದಿತ ಶೈಕ್ಷಣಿಕ ಅರ್ಹತೆಯ ಜೊತೆಗೆ ಈ ಮೇಲ್ಕಂಡ ಅರ್ಹತೆಗಳನ್ನು ಹೊಂದಿರುವ ಅಭ್ಯರ್ಥಿಗಳು ನೇಮಕಾತಿಗಾಗಿ ಅರ್ಜಿ ಸಲ್ಲಿಸಲು ಅರ್ಹತೆಯನ್ನು ಹೊಂದಿರುತ್ತಾರೆ.

**5. ನೇಮಕಾತಿ ವಿಧಾನ :–**

ಸರ್ಕಾರದ ಅಧಿಸೂಚನೆ ಸಂಖ್ಯೆ : ಎಜಿಡಿ/28/ಎಎನ್ಇ/2015. ದಿನಾಂಕ:19.11.2016ರ ಕರ್ನಾಟಕ ಕೃಷಿ ಸೇವೆಗಳು (ಸಹಾಯಕ ಕೃಷಿ ನಿರ್ದೇಶಕರು, ಕೃಷಿ ಅಧಿಕಾರಿ ಮತ್ತು ಸಹಾಯಕ ಕೃಷಿ ಅಧಿಕಾರಿಗಳ ನೇಮಕಾತಿ) (ವಿಶೇಷ) ನಿಯಮಗಳು–2016ರ ಅನುಸೂಚಿಯಲ್ಲಿ ನಮೂದಿಸಿರುವ ಕೃಷಿ ಇಲಾಖೆಯಲ್ಲಿ ಖಾಲಿ ಇರುವ ಗ್ರೂಪ್–ಎ ಮತ್ತು ಗ್ರೂಪ್–ಬಿ ಹುದ್ದೆಗಳಿಗೆ ಅಭ್ಯರ್ಥಿಗಳ ಆಯ್ಕೆಯನ್ನು ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಪಡೆದ ಶೇಕಡಾ 50ರಷ್ಟು ಅಂಕಗಳನ್ನು ಮತ್ತು ಅಭ್ಯರ್ಥಿಗಳು ಶೈಕ್ಷಣಿಕ ಅರ್ಹತಾ ಪರೀಕ್ಷೆಯಲ್ಲಿ ಪಡೆದಿರುವ ಶೇಕಡಾ 50ರಷ್ಟು ಅಂಕಗಳನ್ನು ಆಧರಿಸಿ ಕಾಲಕಾಲಕ್ಕೆ ಚಾಲ್ತಿಯಲ್ಲಿರುವ ಮೀಸಲಾತಿ ನಿಯಮಗಳ ಅನುಸಾರ ಖಾಲಿ ಹುದ್ದೆಗಳಿಗೆ ಅನುಗುಣವಾಗಿ ಆಯ್ಕೆ ಮಾಡಲಾಗುತ್ತದೆ.

- ➢ **ಶೈಕ್ಷಣಿಕ ಅರ್ಹತಾ ಪರೀಕ್ಷೆ :–** ಸಹಾಯಕ ಕೃಷಿ ನಿರ್ದೇಶಕರ ಹುದ್ದೆಗೆ–ಎಂ.ಎಸ್ಸಿ(ಕೃಷಿ), ಕೃಷಿ ಅಧಿಕಾರಿ/ಸಹಾಯಕ ಕೃಷಿ ಅಧಿಕಾರಿ ಹುದ್ದೆಗಳಿಗೆ–ಬಿ.ಎಸ್ಸಿ(ಕೃಷಿ)ಯಲ್ಲಿ ಪಡೆದ ಶೇ.50 ರಷ್ಟು ಅಂಕಗಳನ್ನು ಆಯ್ಕೆಗೆ ಪರಿಗಣಿಸಲಾಗುವುದು.

ಆಯ್ಕೆಯಾದ ಅಭ್ಯರ್ಥಿಗಳ ಮೀಸಲಾತಿಗೆ (ಮೀಸಲಾತಿ ವರ್ಗೀಕರಣಗಳಂತೆ) ಸಂಬಂಧಿಸಿದಂತೆ ಸಿಂಧುತ್ವ ಪ್ರಮಾಣ ಪತ್ರವನ್ನು ಹಾಗೂ ಪೋಲೀಸ್ ವರದಿ, ದೇಹದಾರ್ಢ್ಯ ವೈದ್ಯಕೀಯ ಪ್ರಮಾಣಪತ್ರ ಇವುಗಳನ್ನು ಸಂಬಂಧಿಸಿದ ಸಕ್ಷಮ ಪ್ರಾಧಿಕಾರಗಳಿಂದ ಪಡೆದು ಆಯ್ಕೆ ಬಗ್ಗೆ ಸಮರ್ಥನೆಯಾದ ಪ್ರಕರಣಗಳಿಗೆ ಮಾತ್ರ ನೇಮಕಾತಿ ಆದೇಶ ನೀಡಲಾಗುವುದು.

ಅಭ್ಯರ್ಥಿಯು ಒಂದಕ್ಕಿಂತ ಹೆಚ್ಚು ಹುದ್ದೆಗಳಿಗೆ ಆಯ್ಕೆಯಾದಲ್ಲಿ ಅಂತಹ ಅಭ್ಯರ್ಥಿಯನ್ನು ಆಯ್ಕೆಯಾಗಿರುವ ಹುದ್ದೆಗಳಲ್ಲಿ ಉನ್ನತ ಹುದ್ದೆಗೆ ಮಾತ್ರ ಪರಿಗಣಿಸಲಾಗುವುದು.

➢ **ಮೇಲ್ಕಂಡ ಹುದ್ದೆಗಳ ಆಯ್ಕೆಗಾಗಿ ಮೌಖಿಕ ಪರೀಕ್ಷೆ ಇರುವುದಿಲ್ಲ.**

**5.1 ಕಡ್ಡಾಯ ಕನ್ನಡ ಪರೀಕ್ಷೆ :–**

ಮೇಲ್ಕಂಡ ಹುದ್ದೆಗಳ ಆಯ್ಕೆಗೆ ಅರ್ಹರಾಗಲು ಅಭ್ಯರ್ಥಿಗಳಿಗೆ ಎಸ್.ಎಸ್.ಎಲ್.ಸಿ ಪರೀಕ್ಷೆಯ ಕನ್ನಡ ಪ್ರಥಮ ಭಾಷೆಯ ಮಟ್ಟದ 150 ಅಂಕಗಳಿಗೆ ಪರೀಕ್ಷೆ ನಡೆಸಲಿದ್ದು, ಅದರಲ್ಲಿ ಕನಿಷ್ಠ 50 ಅಂಕಗಳೊಂದಿಗೆ ಕಡ್ಡಾಯವಾಗಿ ತೇರ್ಗಡೆ ಹೊಂದಲೇಬೇಕು. ನಿಗದಿಪಡಿಸಿದ ಕನಿಷ್ಠ 50 ಅಂಕಗಳನ್ನು ಪಡೆಯದ ಅಭ್ಯರ್ಥಿಗಳು ಆಯ್ಕೆಗೆ ಅರ್ಹರಾಗುವುದಿಲ್ಲ. ಕನ್ನಡ ಪರೀಕ್ಷೆಯಲ್ಲಿ ಪಡೆದ ಅಂಕಗಳನ್ನು ಆಯ್ಕೆಗೆ ಪರಿಗಣಿಸುವುದಿಲ್ಲ. ಪರಂತು ಎಸ್.ಎಸ್.ಎಲ್.ಸಿ ಅಥವಾ ಅದಕ್ಕೆ ತತ್ಸಮಾನವೆಂದು ಘೋಷಿಸಲ್ಪಟ್ಟ ಯಾವುದೇ ಪರೀಕ್ಷೆಯಲ್ಲಿ ಅಥವಾ ಎಸ್.ಎಸ್.ಎಲ್.ಸಿ ಗಿಂತ ಮೇಲ್ಮಟ್ಟದ ಯಾವುದೇ ಪರೀಕ್ಷೆಯಲ್ಲಿ ಕನ್ನಡವನ್ನು ಪ್ರಥಮ/ದ್ವಿತೀಯ ಭಾಷೆ ಅಥವಾ ಐಚ್ಛಿಕ ವಿಷಯವಾಗಿ (ಆದರೆ ಸಂಯುಕ್ತ ಪತ್ರಿಕೆಯ ವಿಷಯಗಳಲ್ಲೊಂದಾಗಿರಬಾರದು) ಅಥವಾ ಮೇಲಿನ ಪರೀಕ್ಷೆಗಳಲ್ಲಿ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿ ತೇರ್ಗಡೆಯಾಗಿದ್ದರೆ ಅಥವಾ ಲೋಕಸೇವಾ ಆಯೋಗದಿಂದ ಈ ಹಿಂದೆ ನಡೆಸಲ್ಪಟ್ಟ ಕಡ್ಡಾಯ ಕನ್ನಡ ಭಾಷಾ ಪರೀಕ್ಷೆಯಲ್ಲಿ ಉತ್ತೀರ್ಣರಾಗಿದ್ದಲ್ಲಿ ಕನ್ನಡ ಭಾಷಾ ಪರೀಕ್ಷೆಯಲ್ಲಿ ತೇರ್ಗಡೆ ಹೊಂದುವ ಬಗ್ಗೆ ವಿನಾಯಿತಿ ನೀಡಲಾಗುವುದು.

**ಈ ಮೇಲಿನ ಹುದ್ದೆಗಳ ನೇಮಕಾತಿಗಾಗಿ ನಡೆಸುವ ಸ್ಪರ್ಧಾತ್ಮಕ ಪರೀಕ್ಷೆಯ ಪಠ್ಯಕ್ರಮವನ್ನು ಅನುಬಂಧ–2ರಲ್ಲಿ ತೋರಿಸಲಾಗಿದೆ.**

ಅಭ್ಯರ್ಥಿಗಳು ಅರ್ಜಿಯಲ್ಲಿ ಅವರು ಸ್ಪರ್ಧಾತ್ಮಕ ಪರೀಕ್ಷೆ ತೆಗೆದುಕೊಳ್ಳಲು ಇಚ್ಛಿಸುವ ಕೇಂದ್ರವನ್ನು ನಮೂದಿಸತಕ್ಕದು(ಅನುಬಂಧ–1ನ್ನು ನೋಡತಕ್ಕದ್ದು). ಅಭ್ಯರ್ಥಿಯು ಆಯ್ಕೆ ಮಾಡಿದ ಕೇಂದ್ರದಲ್ಲಿ ಸ್ಪರ್ಧಾತ್ಮಕ ಪರೀಕ್ಷೆಯನ್ನು ಕಾರಣಾಂತರಗಳಿಂದ ನಡೆಸಲಾಗದಿದ್ದ ಪಕ್ಷದಲ್ಲಿ ಪರೀಕ್ಷೆಯನ್ನು

ಹತ್ತಿರದ ಕೇಂದ್ರದಲ್ಲಿ ನಡೆಸಲಾಗುವುದು. ಪರೀಕ್ಷೆಗಳ ದಿನಾಂಕವನ್ನು ಮುಂದೆ ಇಲಾಖೆಯ ವೆಬ್ ಸೈಟ್-"**http://raitamitra.kar.nic.in**"ನಲ್ಲಿ ಪ್ರಕಟಿಸಲಾಗುವುದು.

**5.2 ಸ್ಪರ್ಧಾತ್ಮಕ ಪರೀಕ್ಷಾ ವಿಧಾನ :–**

| ಪತ್ರಿಕೆ | ವಿಷಯ | ಅಂಕಗಳು | ಪರೀಕ್ಷಾ ಅವಧಿ | ಪರೀಕ್ಷಾ ವಿಧಾನ |
|---|---|---|---|---|
| **ಪತ್ರಿಕೆ 1** | ಸಾಮಾನ್ಯ ಜ್ಞಾನ | 100 ಅಂಕಗಳು | 1 1/2 ಗಂಟೆಗಳ ಅವಧಿ | (ವಸ್ತುನಿಷ್ಟ ಬಹು ಆಯ್ಕೆ ಪತ್ರಿಕೆ) (Objective Multiple Choice Type) |
| **ಪತ್ರಿಕೆ 2** | ನಿರ್ದಿಷ್ಟ ಪ್ರಶ್ನೆ ಪತ್ರಿಕೆ | 200 ಅಂಕಗಳು | 3 ಗಂಟೆಗಳ ಅವಧಿ | (ವಸ್ತುನಿಷ್ಟ ಬಹು ಆಯ್ಕೆ ಪತ್ರಿಕೆ) (Objective Multiple Choice Type) |

ಸದರಿ ಹುದ್ದೆಗಳ ನೇಮಕಾತಿಗೆ ಸ್ಪರ್ಧಾತ್ಮಕ ಪರೀಕ್ಷೆಯನ್ನು **ಕರ್ನಾಟಕ ಪರೀಕ್ಷಾ ಪ್ರಾಧಿಕಾರ** ಇವರ ಮೂಲಕ ಆಫ್ ಲೈನ್–ಓಎಂಆರ್ ಮಾದರಿ (Offline-OMR type) ಮುಖಾಂತರ ನಡೆಸಲಾಗುವುದು.

**ಋಣಾತ್ಮಕ ಮೌಲ್ಯ ಮಾಪನ (Negative Valuation) :** ಸ್ಪರ್ಧಾತ್ಮಕ ಪರೀಕ್ಷೆಗಳ ಪ್ರಶ್ನೆ ಪತ್ರಿಕೆಗಳಲ್ಲಿನ ಪ್ರತಿಯೊಂದು ಪ್ರಶ್ನೆಗೂ 04 ಪರ್ಯಾಯ ಉತ್ತರಗಳಿದ್ದು, ಅಭ್ಯರ್ಥಿಯು ಯಾವುದಾದರೂ ಒಂದು ಸರಿ ಉತ್ತರವನ್ನು ಆಯ್ಕೆ ಮಾಡತಕ್ಕದ್ದು. ಪ್ರತಿ ತಪ್ಪು ಉತ್ತರಕ್ಕೆ ಪ್ರಶ್ನೆಗೆ ನಿಗದಿಪಡಿಸಿದ ಅಂಕಗಳಿಂದ 0.25(1/4) ರಷ್ಟು ಅಂಕಗಳನ್ನು ಕಳೆಯಲಾಗುವುದು.

**ಸೂಚನೆ–1 :–** ಸರ್ಕಾರದ ಅಧಿಸೂಚನೆ ಸಂಖ್ಯೆ : ಎಜಿಡಿ/28/ಎಎನ್ಇ/2015, ದಿನಾಂಕ:19.11.2016ರ ಕರ್ನಾಟಕ ಕೃಷಿ ಸೇವೆಗಳು (ಸಹಾಯಕ ಕೃಷಿ ನಿರ್ದೇಶಕರು, ಕೃಷಿ ಅಧಿಕಾರಿ ಮತ್ತು ಸಹಾಯಕ ಕೃಷಿ ಅಧಿಕಾರಿಗಳ ನೇಮಕಾತಿ) (ವಿಶೇಷ) ನಿಯಮಗಳು–2016ರಲ್ಲಿ ಸೂಚಿಸಿರುವ ಪಠ್ಯಕ್ರಮವನ್ನು ಮತ್ತು ಕನ್ನಡ ಕಡ್ಡಾಯ ಭಾಷಾ ಪರೀಕ್ಷೆ ಪಠ್ಯಕ್ರಮವನ್ನು ಅನುಬಂಧ–2ರಲ್ಲಿ ನೋಡತಕ್ಕದ್ದು.

**ಸೂಚನೆ–2 :** ಸಹಾಯಕ ಕೃಷಿ ನಿರ್ದೇಶಕರು, ಕೃಷಿ ಅಧಿಕಾರಿ ಮತ್ತು ಸಹಾಯಕ ಕೃಷಿ ಅಧಿಕಾರಿ ಹುದ್ದೆಗಳಿಗೆ (ಹೈದ್ರಾಬಾದ್–ಕರ್ನಾಟಕ ಮತ್ತು ಉಳಿಕೆ ವೃಂದ ಸೇರಿದಂತೆ) ಒಂದೇ ಪರೀಕ್ಷೆ ನಡೆಸಲಾಗುವುದು.

**ಸೂಚನೆ–3 :** ಸ್ಪರ್ಧಾತ್ಮಕ ಪರೀಕ್ಷೆಯ ಪ್ರಶ್ನೆ ಪತ್ರಿಕೆಗಳು ಕನ್ನಡ ಮತ್ತು ಆಂಗ್ಲ ಭಾಷೆಗಳೆರಡರಲ್ಲೂ ಇರುತ್ತವೆ. ಕನ್ನಡ ಭಾಷೆಯಲ್ಲಿರುವ ಪ್ರಶ್ನೆಗಳ ಭಾಷಾಂತರದಲ್ಲಿ ಏನಾದರೂ ಅಸ್ಪಷ್ಟತೆ ಇದ್ದಲ್ಲಿ ಅಭ್ಯರ್ಥಿಗಳು ಆಂಗ್ಲ ಭಾಷೆಯಲ್ಲಿರುವ ಪ್ರಶ್ನೆಗಳನ್ನು ನೋಡುವುದು ಹಾಗೂ ಇದೇ ಅಂತಿಮವಾಗಿರುತ್ತದೆ.

**6. ಶೈಕ್ಷಣಿಕ ವಿದ್ಯಾರ್ಹತೆ :–**

ಸರ್ಕಾರದ ಅಧಿಸೂಚನೆ ಸಂಖ್ಯೆ:ಎಜಿಡಿ/28/ಎಎನ್ಇ/2015, ದಿನಾಂಕ:19.11.2016ರ ಕರ್ನಾಟಕ ಕೃಷಿ ಸೇವೆಗಳು (ಸಹಾಯಕ ಕೃಷಿ ನಿರ್ದೇಶಕರು, ಕೃಷಿ ಅಧಿಕಾರಿ ಮತ್ತು ಸಹಾಯಕ ಕೃಷಿ ಅಧಿಕಾರಿಗಳ ನೇಮಕಾತಿ) (ವಿಶೇಷ) ನಿಯಮಗಳು–2016ರ ಅನುಸೂಚಿ(Schedule)ಯಲ್ಲಿ ನಿಗದಿಪಡಿಸಿರುವಂತೆ ಅರ್ಜಿಗಳನ್ನು ಭರ್ತಿ ಮಾಡಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಕೆಳಕಂಡಂತೆ ಆಯಾ ಹುದ್ದೆಗಳ ಮುಂದೆ ಸೂಚಿಸಿರುವ ವಿದ್ಯಾರ್ಹತೆಯನ್ನು ಅಭ್ಯರ್ಥಿಗಳು ಹೊಂದಿರಲೇಬೇಕು.

| ಕ್ರ.ಸಂ | ಹುದ್ದೆ | ಕನಿಷ್ಠ ವಿದ್ಯಾರ್ಹತೆ |
|---|---|---|
| 1. | ಸಹಾಯಕ ಕೃಷಿ ನಿರ್ದೇಶಕರು | ಭಾರತದಲ್ಲಿ ಕಾನೂನು ರೀತ್ಯಾ ಮತ್ತು ಐ.ಸಿ.ಎ.ಆರ್ (ICAR) ನಿಂದ ಮಾನ್ಯತೆ ಪಡೆದು ಸ್ಥಾಪಿಸಲಾದ ಯಾವುದೇ ಕೃಷಿ ವಿಶ್ವವಿದ್ಯಾಲಯದಿಂದ ಸ್ನಾತಕೋತ್ತರ ಎಂ.ಎಸ್ಸಿ,(ಕೃಷಿ) ಪದವಿ ಪಡೆದಿರಬೇಕು. |
| 2. | ಕೃಷಿ ಅಧಿಕಾರಿ | ಭಾರತದಲ್ಲಿ ಕಾನೂನು ರೀತ್ಯಾ ಮತ್ತು ಐ.ಸಿ.ಎ.ಆರ್ (ICAR) ನಿಂದ ಮಾನ್ಯತೆ ಪಡೆದು ಸ್ಥಾಪಿಸಲಾದ ಯಾವುದೇ ಕೃಷಿ ವಿಶ್ವವಿದ್ಯಾಲಯದಿಂದ ಬಿ.ಎಸ್ಸಿ,(ಕೃಷಿ) ಪದವಿ ಪಡೆದಿರಬೇಕು. |
| 3. | ಸಹಾಯಕ ಕೃಷಿ ಅಧಿಕಾರಿ | ಭಾರತದಲ್ಲಿ ಕಾನೂನು ರೀತ್ಯಾ ಮತ್ತು ಐ.ಸಿ.ಎ.ಆರ್ (ICAR) ನಿಂದ ಮಾನ್ಯತೆ ಪಡೆದು ಸ್ಥಾಪಿಸಲಾದ ಯಾವುದೇ ಕೃಷಿ ವಿಶ್ವವಿದ್ಯಾಲಯದಿಂದ ಬಿ.ಎಸ್ಸಿ,(ಕೃಷಿ) ಪದವಿ ಪಡೆದಿರಬೇಕು. |

**7. ವೇತನ ಶ್ರೇಣಿ :–**

**ಅ) ಸಹಾಯಕ ಕೃಷಿ ನಿರ್ದೇಶಕರು :–**

**₹.28100–700–28800–800–33600–900–39000–1050–45300–1200–50100.**

**ಆ) ಕೃಷಿ ಅಧಿಕಾರಿ :–**

**₹.22800–600–24600–700–28800–800–33600–900–39000–1050–43200.**

**ಇ) ಸಹಾಯಕ ಕೃಷಿ ಅಧಿಕಾರಿ :–**

**₹.21600–600–24600–700–28800–800–33600–900–39000–1050–40050.**

**8. ವಯೋಮಿತಿ :–**

**ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಯು;**

**ಅ) ಕನಿಷ್ಠ 18 ವರ್ಷಗಳ ವಯಸ್ಸನ್ನು ಪೂರೈಸಿರತಕ್ಕದ್ದು**

**ಆ) ಗರಿಷ್ಟ ವಯೋಮಿತಿಯನ್ನು ಮೀರಿರಬಾರದು**

| | |
|---|---|
| ಸಾಮಾನ್ಯ ವರ್ಗ | 35 ವರ್ಷ |
| ಪ್ರವರ್ಗ 2ಎ, 2ಬಿ, 3ಎ, 3ಬಿ | 38 ವರ್ಷ |
| ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ /ಪ್ರವರ್ಗ–1 | 40 ವರ್ಷ |

**ಅಭ್ಯರ್ಥಿಗಳ ಜನ್ಮ ದಿನಾಂಕವನ್ನು ಅವರ ಎಸ್.ಎಸ್.ಎಲ್.ಸಿ ಅಥವಾ ತತ್ಸಮಾನ ವಿದ್ಯಾರ್ಹತೆಯ ಪ್ರಮಾಣ ಪತ್ರದಲ್ಲಿ ನಮೂದಿಸಿರುವಂತೆ ಪರಿಗಣಿಸಲಾಗುವುದು. ಇವುಗಳನ್ನು ಹೊರತುಪಡಿಸಿ ಇತರೆ ಯಾವುದೇ ದಾಖಲೆಗಳನ್ನು ಪರಿಗಣಿಸಲಾಗುವುದಿಲ್ಲ.**

ಸಾಮಾನ್ಯ ನೇಮಕಾತಿ ನಿಯಮಗಳ ಅನುಸಾರ ಈ ಕೆಳಗಿನ ಸಂದರ್ಭಗಳಲ್ಲಿ ಸದರಿ ನಿಯಮಗಳಲ್ಲಿ ನಿಗದಿಪಡಿಸಿರುವ ಗರಿಷ್ಠ ವಯೋಮಿತಿಯನ್ನು ಕೆಳಗೆ ತಿಳಿಸಿರುವಷ್ಟರ ಮಟ್ಟಿಗೆ ಹೆಚ್ಚಿಸಲಾಗುವುದು.

| | | |
|---|---|---|
| (ಅ) | ಕರ್ನಾಟಕ ರಾಜ್ಯ ಸರ್ಕಾರದಲ್ಲಿ ಅಥವಾ ಸ್ಥಳೀಯ ಪ್ರಾಧಿಕಾರದಲ್ಲಿ ಅಥವಾ ರಾಜ್ಯ ಅಧಿನಿಯಮ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಯಾದ ಅಥವಾ ರಾಜ್ಯ ಅಧಿನಿಯಮದ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಗೊಂಡು ಕರ್ನಾಟಕ ರಾಜ್ಯ ಸರ್ಕಾರದ ಸ್ವಾಮ್ಯ ಅಥವಾ ನಿಯಂತ್ರಣದಲ್ಲಿರುವ ನಿಗಮದಲ್ಲಿ ಹುದ್ದೆ ಹೊಂದಿರುವ ಅಥವಾ ಹಿಂದೆ ಹೊಂದಿದ ಅಭ್ಯರ್ಥಿಗಳಿಗೆ. | ಸೇವೆ ಸಲ್ಲಿಸಿರುವಷ್ಟು ವರ್ಷಗಳು ಅಥವಾ 10 ವರ್ಷಗಳ ಅವಧಿ ಅದರಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳು. |
| (ಆ) | ಮಾಜಿ ಸೈನಿಕನಾಗಿದ್ದಲ್ಲಿ | ಸೇವೆ ಸಲ್ಲಿಸಿರುವಷ್ಟು ವರ್ಷಗಳಿಗೆ ಮೂರು ವರ್ಷಗಳನ್ನು ಸೇರಿಸಿದರೆ ಎಷ್ಟು ವರ್ಷಗಳಾಗುವುದೋ ಅಷ್ಟು ವರ್ಷಗಳು. |
| (ಇ) | ನ್ಯಾಷನಲ್ ಕ್ಯಾಡೆಟ್ ಕೋರ್‌ನಲ್ಲಿ ಪೂರ್ಣಕಾಲಿಕ ಪರಿವೀಕ್ಷಕರಾಗಿ ಸೇವೆ ಸಲ್ಲಿಸಿ ಬಿಡುಗಡೆಯಾಗಿರುವ ವ್ಯಕ್ತಿಗಳಿಗೆ. | ಕ್ಯಾಡೆಟ್ ಪರಿವೀಕ್ಷಕನಾಗಿ ಸೇವೆ ಸಲ್ಲಿಸಿದಷ್ಟು ವರ್ಷಗಳು. |
| (ಈ) | ರಾಜ್ಯ ಸರ್ಕಾರದಿಂದ ಪುರಸ್ಕೃತವಾದ ಗ್ರಾಮೀಣ ಔದ್ಯಮೀಕರಣ ಯೋಜನೆಯ ಮೇರೆಗೆ ನೇಮಕಗೊಂಡ ಗ್ರಾಮ ಸಮೂಹ ಪರಿಶೀಲಕನಾಗಿ ಈಗ ಕೆಲಸ ಮಾಡುತ್ತಿದ್ದರೆ ಅಥವಾ ಹಿಂದೆ ಇದ್ದ ಅಭ್ಯರ್ಥಿಗಳಿಗೆ. | ಗ್ರಾಮ ಸಮೂಹ ಪರಿಶೀಲಕನಾಗಿ ಸೇವೆ ಸಲ್ಲಿಸಿದಷ್ಟು ವರ್ಷಗಳು. |
| (ಉ) | ಅಂಗವಿಕಲ ಅಭ್ಯರ್ಥಿಗಳಿಗೆ | 10 ವರ್ಷಗಳು |
| (ಊ) | ಕರ್ನಾಟಕ ರಾಜ್ಯದಲ್ಲಿರುವ ಭಾರತ ಸರ್ಕಾರದ ಜನಗಣತಿ ಸಂಸ್ಥೆಯಲ್ಲಿ ಈಗ ಹುದ್ದೆಯನ್ನು ಹೊಂದಿದ್ದರೆ ಅಥವಾ ಹಿಂದೆ ಹೊಂದಿದ್ದ ಅಭ್ಯರ್ಥಿಗಳಿಗೆ | ಸೇವೆ ಸಲ್ಲಿಸಿರುವ ವರ್ಷಗಳು ಅಥವಾ 5 ವರ್ಷಗಳ ಅವಧಿ ಅದರಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳು. |
| (ಋ) | ವಿಧವೆಯಾಗಿದ್ದಲ್ಲಿ (ಅಭ್ಯರ್ಥಿಯು ಸಕ್ಷಮ ಪ್ರಾಧಿಕಾರದಿಂದ ತಾನು ವಿಧವೆಯೆಂದು ಹಾಗೂ ಮರು ಮದುವೆಯಾಗಿರುವುದಿಲ್ಲವೆಂಬ ಪ್ರಮಾಣ ಪತ್ರವನ್ನು ಪಡೆದಿಟ್ಟುಕೊಂಡು ಪ್ರಾಧಿಕಾರವು ಸೂಚಿಸಿದಾಗ ಇದರ ಮೂಲ ಪ್ರತಿಯನ್ನು ಪರಿಶೀಲನೆಗೆ ಹಾಜರುಪಡಿಸಬೇಕು) | 10 ವರ್ಷಗಳು |
| (ಎ) | ಜೀತ ಕಾರ್ಮಿಕನಾಗಿದ್ದ ಪಕ್ಷದಲ್ಲಿ ಸದರಿ ಅಧಿನಿಯಮ ಅಥವಾ 1975ರ ಕರ್ನಾಟಕ ಜೀತ ಕಾರ್ಮಿಕ ಪದ್ಧತಿ (ರದ್ದಿಯಾತಿ) ಆದೇಶದ ಮೇರೆಗೆ ಜೀತ ಸಾಲವನ್ನು ಸಂದಾಯ ಮಾಡುವ ಹೊಣೆಯಿಂದ ಬಿಡುಗಡೆಯಾಗಿದ್ದಾನೆಂದು ಪ್ರಮಾಣ ಪತ್ರವನ್ನು ಜಿಲ್ಲಾ ಮ್ಯಾಜಿಸ್ಟ್ರೇಟ್‌ರಿಂದ ಪಡೆದಿಟ್ಟುಕೊಂಡು ಪ್ರಾಧಿಕಾರವು ಸೂಚಿಸಿದಾಗ ಇದರ ಮೂಲ ಪ್ರತಿಯನ್ನು ಪರಿಶೀಲನೆಗೆ ಹಾಜರುಪಡಿಸಬೇಕು. | 10 ವರ್ಷಗಳು |

**9. ಜಾತಿ / ಮೀಸಲಾತಿ ಪ್ರಮಾಣ ಪತ್ರಗಳು :–**

ಮೀಸಲಾತಿ ಕೋರಬಯಸುವ ಅಭ್ಯರ್ಥಿಗಳು ಈ ಕೆಳಗೆ ನಮೂದಿಸಿರುವ ನಮೂನೆಗಳಲ್ಲಿಯೇ ಮೀಸಲಾತಿ ಪ್ರಮಾಣ ಪತ್ರಗಳನ್ನು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ಪಡೆದಿಟ್ಟುಕೊಂಡಿರತಕ್ಕದ್ದು:–

ಅ) ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿದ ಅಭ್ಯರ್ಥಿಗಳು:– ನಮೂನೆ ' ಡಿ '

ಆ) ಪ್ರವರ್ಗ–1 ಕ್ಕೆ ಸೇರಿದ ಅಭ್ಯರ್ಥಿಗಳು:– ನಮೂನೆ ' ಇ '

ಇ) ಪ್ರವರ್ಗ–2ಎ, 2ಬಿ, 3ಎ ಮತ್ತು 3ಬಿ ಮೀಸಲಾತಿಗೆ ಸೇರಿದ ಅಭ್ಯರ್ಥಿಗಳು:– ನಮೂನೆ 'ಎಫ್'

ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಚಾಲ್ತಿಯಲ್ಲಿರುವ ಮೀಸಲಾತಿ ಪ್ರಮಾಣ ಪತ್ರವನ್ನು ಸಂಬಂಧಿತ ತಹಸೀಲ್ದಾರ್‌ರವರಿಂದ ಅಂದರೆ ತಹಶೀಲ್ದಾರ್‌ರವರ ಸಹಿ ಮತ್ತು ಮೊಹರು ಅಥವಾ ಬಾರ್ ಕೋಡ್, ಹಾಲೋಗ್ರಾಮ್ ಮತ್ತು ವಾಟರ್ ಮಾರ್ಕ್‌ನೊಂದಿಗೆ ಪಡೆದಿಟ್ಟುಕೊಂಡಿರತಕ್ಕದ್ದು. ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಮತ್ತು ಪ್ರವರ್ಗ–1ರ ಮೀಸಲಾತಿ ಪ್ರಮಾಣ ಪತ್ರಗಳು ರದ್ದಾಗುವವರೆಗೂ ಚಾಲ್ತಿಯಲ್ಲಿರುವುದರಿಂದ ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ನಿಗದಿಪಡಿಸಿದ ನಮೂನೆಯಲ್ಲಿ ಪಡೆದಿಟ್ಟುಕೊಂಡಿರತಕ್ಕದ್ದು. ಇತರೆ ಹಿಂದುಳಿದ ವರ್ಗಗಳ ಪ್ರವರ್ಗ–2ಎ, ಪ್ರವರ್ಗ–2ಬಿ, ಪ್ರವರ್ಗ–3ಎ ಮತ್ತು ಪ್ರವರ್ಗ–3ಬಿ ವರ್ಗದ ಮೀಸಲಾತಿ ಪ್ರಮಾಣ ಪತ್ರಗಳು 5 ವರ್ಷ ಚಾಲ್ತಿಯಲ್ಲಿರುತ್ತವೆ. ಅಭ್ಯರ್ಥಿಗಳು ಪಡೆದಿರುವ ಪ್ರಮಾಣ ಪತ್ರವು ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಚಾಲ್ತಿಯಲ್ಲಿರಬೇಕು. ಮೂಲ

ದಾಖಲಾತಿ ಪರಿಶೀಲನೆಗೆ ಅರ್ಹರಾದಾಗ ಕೊನೆಯ ದಿನಾಂಕದಂದು ಚಾಲ್ತಿಯಲ್ಲಿರುವ ಮೀಸಲಾತಿ ಪ್ರಮಾಣ ಪತ್ರದ ಮೂಲ ಪ್ರತಿಯನ್ನು ಪರಿಶೀಲನೆಗೆ ತಪ್ಪದೇ ಹಾಜರುಪಡಿಸತಕ್ಕದ್ದು, ತಪ್ಪಿದಲ್ಲಿ ಅಂತಹ ಅಭ್ಯರ್ಥಿಗಳ ಮೀಸಲಾತಿಯನ್ನು ರದ್ದುಪಡಿಸಿ ಅವರ ಅಭ್ಯರ್ಥಿತನವನ್ನು ಸಾಮಾನ್ಯ ಅರ್ಹತೆಯಡಿಯಲ್ಲಿ ಅರ್ಹರಾದಲ್ಲಿ ಮಾತ್ರ ಪರಿಗಣಿಸಲಾಗುವುದು. ಈ ಪ್ರಮಾಣ ಪತ್ರಗಳ ನಮೂನೆಗಳನ್ನು ಅಧಿಸೂಚನೆಯ ಕೊನೆಯಲ್ಲಿ ತೋರಿಸಲಾಗಿದೆ. ಈ ನಮೂನೆಗಳನ್ನು ಹೊರತುಪಡಿಸಿ ಇತರೆ ಯಾವುದೇ ನಮೂನೆಗಳಲ್ಲಿ ಪಡೆಯಲಾದ ಮೀಸಲಾತಿ ಪ್ರಮಾಣ ಪತ್ರಗಳನ್ನು ತಿರಸ್ಕರಿಸಲಾಗುವುದು.

**10. ಮಾಜಿ ಸೈನಿಕ :**

ಸರ್ಕಾರದ ಅಧಿಸೂಚನೆ ಸಂಖ್ಯೆ ಡಿಪಿಎಆರ್ 13 ಎಸ್‌ಆರ್‌ಆರ್ 92, ದಿನಾಂಕ: 01–04–1992 ಮತ್ತು ಅಧಿಸೂಚನೆ ಸಂಖ್ಯೆ ಡಿಪಿಎಆರ್ 28 ಎಸ್‌ಆರ್‌ಆರ್ 95 ದಿನಾಂಕ: 21–10–1995 ರನ್ವಯ ನೇರ ನೇಮಕಾತಿಗಳಲ್ಲಿ ಶೇಕಡ 10 ರಷ್ಟು ಹುದ್ದೆಗಳನ್ನು ಮಾಜಿ ಸೈನಿಕರಿಗೆ ಮೀಸಲಾತಿ ಕಲ್ಪಿಸಲಾಗಿದೆ. ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಗಳು, 1977 ರಲ್ಲಿದ್ದಂತೆ ಮಾಜಿ ಸೈನಿಕರ ವಿವರಣೆ ಕೆಳಕಂಡಂತಿದೆ:

(1) ಮಾಜಿ ಸೈನಿಕ ಎಂದರೆ ಕೇಂದ್ರ ಸಶಸ್ತ್ರ ದಳಗಳಾದ ನಿಯಮಿತ ಭೂದಳ, ನೌಕಾದಳ ಮತ್ತು ವಾಯು ದಳದಲ್ಲಿ ಯಾವುದೇ ಶ್ರೇಣಿಯಲ್ಲಿ (ಯೋಧ ಅಥವಾ ಯೋಧನಲ್ಲದ) ಸೇವೆ ಸಲ್ಲಿಸಿದ ವ್ಯಕ್ತಿ ಆದರೆ ಡಿಫೆನ್ಸ್ ಸೆಕ್ಯೂರಿಟಿ ಕೋರ್, ಜನರಲ್ ರಿಸರ್ವ್ ಇಂಜಿನಿಯರಿಂಗ್ ಫೋರ್ಸ್, ಲೋಕ ಸಹಾಯಕ ಸೇವೆ ಮತ್ತು ಪ್ಯಾರಾ ಮಿಲಿಟರಿ ದಳದಲ್ಲಿ ಸೇವೆ ಸಲ್ಲಿಸಿದ ವ್ಯಕ್ತಿ ಸೇರ್ಪಡೆಯಾಗುವುದಿಲ್ಲ ಮತ್ತು

(2) ಕೇಂದ್ರ ಸಶಸ್ತ್ರ ದಳಗಳಲ್ಲಿ ಸೇವೆ ಸಲ್ಲಿಸುವಾಗ ಕೊಲ್ಲಲ್ಪಟ್ಟ ಅಥವಾ ಶಾಶ್ವತವಾಗಿ ದೈಹಿಕ ವಿಕಲತೆ ಹೊಂದಿದ ವ್ಯಕ್ತಿಗಳ ಕುಟುಂಬದವರು (ಸಂದರ್ಭಾನುಸಾರ ಹೆಂಡತಿ ಅಥವಾ ಗಂಡ ಮತ್ತು ಮಕ್ಕಳು ಮತ್ತು ಮಲ ಮಕ್ಕಳು) ಮಾಜಿ ಸೈನಿಕ ಮೀಸಲಾತಿಗೆ ಅರ್ಹರಾಗಿರುತ್ತಾರೆ. ಆದರೆ ಅಂತಹವರುಗಳಿಗೆ ವಯೋಮಿತಿ ಸಡಿಲಿಕೆಯನ್ನು ನೀಡಲಾಗುವುದಿಲ್ಲ.

ಅ) ಅಂತಹ ಸೇವೆಯಿಂದ ನಿವೃತ್ತಿ ಹೊಂದಿದ ನಂತರ ನಿವೃತ್ತಿ ವೇತನ ಪಡೆಯುತ್ತಿರುವ

ಅಥವಾ

ಆ) ವೈದ್ಯಕೀಯ ಕಾರಣಗಳಿಂದ ಮಿಲಿಟರಿ ಸೇವೆಯಿಂದ ಬಿಡುಗಡೆಯಾದ ಅಥವಾ ವ್ಯಕ್ತಿಯ ಹಿಡಿತಕ್ಕೂ ಮೀರಿದ ಪರಿಸ್ಥಿತಿಗಳಿಂದ ಮತ್ತು ವೈದ್ಯಕೀಯ ಅಥವಾ ಅಸಾಮರ್ಥ್ಯದ ಪಿಂಚಣಿ ಪಡೆದು ಅಂತಹ ಸೇವೆಯಿಂದ ಬಿಡುಗಡೆಯಾದವನು

ಅಥವಾ

ಇ) ಸ್ವಂತ ಕೋರಿಕೆ ಹೊರತುಪಡಿಸಿ ಸಿಬ್ಬಂದಿ ಕಡಿತದ ಪರಿಣಾಮದಿಂದ ಅಂತಹ ಸೇವೆಯಿಂದ ಬಿಡುಗಡೆ ಹೊಂದಿದ ವ್ಯಕ್ತಿ.

ಅಥವಾ

ಈ) ತನ್ನ ಸ್ವಂತ ಕೋರಿಕೆ ಮೇರೆಗೆ ಅಥವಾ ದುರ್ನಡತೆ ಅಥವಾ ಅಸಾಮರ್ಥ್ಯದ ಕಾರಣದಿಂದಾಗಿ ತೆಗೆದುಹಾಕಿರುವ ಅಥವಾ ಕರ್ತವ್ಯದಿಂದ ವಜಾ ಮಾಡಿದ ವ್ಯಕ್ತಿಗಳನ್ನು ಹೊರತುಪಡಿಸಿ, ನಿರ್ದಿಷ್ಟ ಅವಧಿಯನ್ನು ಪೂರೈಸಿದ ತರುವಾಯ ಬಿಡುಗಡೆ ಹೊಂದಿದ ವ್ಯಕ್ತಿ ಮತ್ತು ಗ್ರಾಚ್ಯುಟಿ ಪಡೆಯುತ್ತಿರುವ ವ್ಯಕ್ತಿ ಮತ್ತು ಪ್ರಾಂತೀಯ ಸೇವೆಯ ಈ ಕೆಳಗೆ ಹೆಸರಿಸಿದ ವರ್ಗದ ಸಿಬ್ಬಂದಿಯವರು:–

i) ನಿರಂತರ ಸೇವೆ ಸಲ್ಲಿಸಿದ ನಿವೃತ್ತಿ ಹೊಂದಿದ ಪಿಂಚಣಿದಾರರು.

ii) ಮಿಲಿಟರಿ ಸೇವೆಯಿಂದಾಗಿ ಉಂಟಾದ ದೈಹಿಕ ಅಸಾಮರ್ಥ್ಯತೆ ಹೊಂದಿ ಬಿಡುಗಡೆಯಾದ ವ್ಯಕ್ತಿ.

iii) ಗ್ಯಾಲಂಟ್ರಿ ಪ್ರಶಸ್ತಿ ವಿಜೇತರು.

**ವಿವರಣೆ :–** ಕೇಂದ್ರ ಸಶಸ್ತ್ರ ದಳದಲ್ಲಿ ಸೇವೆಯಲ್ಲಿರುವ ವ್ಯಕ್ತಿಗಳು ಸೇವೆಯಿಂದ ನಿವೃತ್ತಿ ಹೊಂದಿದ ನಂತರ ಮಾಜಿ ಸೈನಿಕರ ವರ್ಗದಡಿ ಬರುವ ವ್ಯಕ್ತಿಗೆ ನಿರ್ದಿಷ್ಟ ಒಪ್ಪಂದವು ಪೂರ್ಣವಾಗಲು ಒಂದು ವರ್ಷಕ್ಕೆ ಮುನ್ನ ಪುನರ್ ಉದ್ಯೋಗಕ್ಕೆ ಅರ್ಜಿ ಹಾಕಿಕೊಳ್ಳಲು ಹಾಗೂ ಅವರಿಗೆ ಮಾಜಿ ಸೈನಿಕರಿಗೆ ದೊರೆಯುವ ಎಲ್ಲಾ ಸೌಲಭ್ಯಗಳನ್ನು ಹೊಂದಲು ಅನುಮತಿ ನೀಡಲಾಗಿದೆ. ಆದರೆ ಸಮವಸ್ತ್ರವನ್ನು ತ್ಯಜಿಸಲು ಅನುಮತಿ ನೀಡುವವರೆಗೆ ರಾಜ್ಯ ನಾಗರಿಕ ಸೇವೆ ಅಥವಾ ಹುದ್ದೆಗೆ ನೇಮಕ ಹೊಂದುವಂತಿಲ್ಲ. ಇಂತಹವರು ಅರ್ಜಿ ಸಲ್ಲಿಸುವ ಮುನ್ನ ಸೇನೆಯಿಂದ ನಿರಾಕ್ಷೇಪಣಾ ಪತ್ರ ಪಡೆದು ಸಲ್ಲಿಸಬೇಕು. ಸೇನೆಯಿಂದ ಬಿಡುಗಡೆಯಾದ ವ್ಯಕ್ತಿಗಳು ಅವರ ಬಿಡುಗಡೆ ಪ್ರಮಾಣ ಪತ್ರವನ್ನು/ಮಾಜಿ ಸೈನಿಕರ ಅವಲಂಬಿತರು ಮಾಜಿ ಸೈನಿಕರು ಸೇವೆಯಲ್ಲಿದ್ದಾಗ ಕೊಲ್ಲಲ್ಪಟ್ಟಿರುವ/ಶಾಶ್ವತವಾಗಿ ಅಂಗವಿಕಲರಾದ ಬಗ್ಗೆ ಪ್ರಮಾಣ ಪತ್ರವನ್ನು ಮೂಲ ದಾಖಲಾತಿ ಪರಿಶೀಲನೆಗೆ ತಪ್ಪದೆ ಹಾಜರುಪಡಿಸಬೇಕು (ಈ ಪ್ರಮಾಣ ಪತ್ರದ ನಮೂನೆಯನ್ನು ಅಧಿಸೂಚನೆಯ ಕೊನೆಯಲ್ಲಿ ತೋರಿಸಲಾಗಿದೆ).

**11. ಗ್ರಾಮೀಣ ಅಭ್ಯರ್ಥಿ :–**

ಸರ್ಕಾರಿ ಅಧಿಸೂಚನೆ ಸಂಖ್ಯೆ: ಸಂವ್ಯಶಾಇ 59 ಶಾಸನ 2000, ದಿನಾಂಕ: 06–01–2001 ರನ್ವಯ ಗ್ರಾಮೀಣ ಮೀಸಲಾತಿಯಡಿ ಅರ್ಜಿ ಸಲ್ಲಿಸುವಂತಹ ಅಭ್ಯರ್ಥಿಗಳು ನಿಯಮಗಳ ರೀತ್ಯಾ 1 ರಿಂದ 10ನೇ ತರಗತಿಯವರೆಗೆ ಗ್ರಾಮೀಣ ಮೀಸಲಾತಿಗೆ ಒಳಪಡುವ ಪ್ರದೇಶಗಳಲ್ಲಿ ವ್ಯಾಸಂಗ ಮಾಡಿ ಉತ್ತೀರ್ಣರಾದಲ್ಲಿ ಮಾತ್ರ ಈ ಮೀಸಲಾತಿಯನ್ನು ಪಡೆಯಲು ಅರ್ಹರು. ಗ್ರಾಮೀಣ ಅಭ್ಯರ್ಥಿಗಳಿಗೆಂದು ಮೀಸಲಿರಿಸಿದ ಹುದ್ದೆಗಳಿಗೆ ಅರ್ಜಿ ಸಲ್ಲಿಸುವ ಸಾಮಾನ್ಯ ಅರ್ಹತೆಯ ಅಭ್ಯರ್ಥಿಗಳು ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 08 ಸೆನೆನಿ 2001 ದಿನಾಂಕ: 13–02–2001 ರನ್ವಯ ನಮೂನೆ–2ನ್ನು ಸಂಬಂಧಪಟ್ಟ ಶಾಲೆಯ ಮುಖ್ಯೋಪಾಧ್ಯಾಯರ ಸಹಿ ಮತ್ತು ಕ್ಷೇತ್ರ ಶಿಕ್ಷಣಾಧಿಕಾರಿಯವರ ಮೇಲುರುಜುವಿನೊಂದಿಗೆ ಹಾಗೂ ಈ ಪ್ರಮಾಣ ಪತ್ರವಲ್ಲದೇ ಮೇಲುಸ್ತರಕ್ಕೆ ಸೇರಿಲ್ಲದಿರುವ ಬಗ್ಗೆ ನಮೂನೆ–1ರಲ್ಲಿ ಪ್ರಮಾಣ ಪತ್ರವನ್ನು ಕಡ್ಡಾಯವಾಗಿ ಸಂಬಂಧಿತ ತಹಶೀಲ್ದಾರ್‌ರವರಿಂದ ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ಪಡೆದಿಟ್ಟುಕೊಂಡಿರತಕ್ಕದ್ದು. ಅಂತೆಯೇ ಗ್ರಾಮೀಣ ಮೀಸಲಾತಿ ಕೋರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, ಪ್ರವರ್ಗ–2ಎ, 2ಬಿ, 3ಎ, 3ಬಿ ಮೀಸಲಾತಿಗೆ ಸೇರಿದ ಅಭ್ಯರ್ಥಿಗಳು ಕಡ್ಡಾಯವಾಗಿ ಗ್ರಾಮೀಣ ಮೀಸಲಾತಿಯ ಪ್ರಮಾಣ ಪತ್ರವನ್ನು ನಮೂನೆ–2ರಲ್ಲಿ ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ಸಂಬಂಧಪಟ್ಟ ಶಾಲೆಯ ಮುಖ್ಯೋಪಾಧ್ಯಾಯರ ಸಹಿ ಮತ್ತು ಕ್ಷೇತ್ರ ಶಿಕ್ಷಣಾಧಿಕಾರಿಯವರ ಮೇಲು ರುಜುವಿನೊಂದಿಗೆ

ಪಡೆದಿಟ್ಟುಕೊಂಡಿರತಕ್ಕದ್ದು. ಮೂಲ ದಾಖಲಾತಿ ಪರಿಶೀಲನೆಗೆ ಅರ್ಹರಾದಾಗ ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ಚಾಲ್ತಿಯಲ್ಲಿರುವ ಮೀಸಲಾತಿ ಪ್ರಮಾಣ ಪತ್ರದ ಮೂಲ ಪ್ರತಿಯನ್ನು ಪರಿಶೀಲನೆಗೆ ತಪ್ಪದೇ ಹಾಜರುಪಡಿಸತಕ್ಕದ್ದು, ತಪ್ಪಿದಲ್ಲಿ ಅಂತಹ ಅಭ್ಯರ್ಥಿಗಳ ಗ್ರಾಮೀಣ ಮೀಸಲಾತಿಯನ್ನು ರದ್ದುಪಡಿಸಲಾಗುವುದು. (ಅಭ್ಯರ್ಥಿಗಳ ನೇರ ಮೀಸಲಾತಿ ಪ್ರಮಾಣ ಪತ್ರಗಳು ತಿರಸ್ಕೃತಗೊಂಡಲ್ಲಿ ಅಂತಹವರು ಗ್ರಾಮೀಣ ಮೀಸಲಾತಿಗೆ ಸಹ ಅನರ್ಹರಾಗುತ್ತಾರೆ. ಈ ಪ್ರಮಾಣ ಪತ್ರಗಳ ನಮೂನೆಗಳನ್ನು ಅಧಿಸೂಚನೆಯ ಕೊನೆಯಲ್ಲಿ ತೋರಿಸಲಾಗಿದೆ).

**12. ಕನ್ನಡ ಮಾಧ್ಯಮ ಅಭ್ಯರ್ಥಿ**

ಸರ್ಕಾರಿ ಅಧಿಸೂಚನೆ ಸಂಖ್ಯೆ ಸಿಆಸುಇ 71 ಸೇನೆನಿ 2001 ದಿನಾಂಕ: 24–10–2002 ರನ್ವಯ ಕನ್ನಡ ಮಾಧ್ಯಮದ ಅಭ್ಯರ್ಥಿಗಳಿಗೆಂದು ಮೀಸಲಿರಿಸಿದ ಹುದ್ದೆಗಳಿಗೆ ಅರ್ಜಿ ಸಲ್ಲಿಸುವಂತಹ ಅಭ್ಯರ್ಥಿಗಳು 1ನೇ ತರಗತಿಯಿಂದ 10ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುವ ಬಗ್ಗೆ ಸಂಬಂಧಪಟ್ಟ ಶಾಲೆಯ ಮುಖ್ಯೋಪಾಧ್ಯಾಯರ ಸಹಿ ಹಾಗೂ ಮೊಹರಿನೊಂದಿಗೆ ಪ್ರಮಾಣ ಪತ್ರವನ್ನು ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ಪಡೆದಿಟ್ಟುಕೊಂಡಿರತಕ್ಕದ್ದು ಹಾಗೂ ಮೂಲ ದಾಖಲಾತಿ ಪರಿಶೀಲನೆಗೆ ಅರ್ಹರಾದಾಗ ಇದೇ ಪ್ರಮಾಣ ಪತ್ರಗಳ ಮೂಲ ಪ್ರತಿಗಳನ್ನು ಪರಿಶೀಲನೆಗೆ ತಪ್ಪದೇ ಹಾಜರುಪಡಿಸತಕ್ಕದ್ದು. ತಪ್ಪಿದಲ್ಲಿ ಅಂತಹ ಅಭ್ಯರ್ಥಿಗಳ ಕ.ಮಾ.ಅ. ಮೀಸಲಾತಿಯನ್ನು ರದ್ದುಪಡಿಸಲಾಗುವುದು. (ಈ ಪ್ರಮಾಣ ಪತ್ರದ ನಮೂನೆಯನ್ನು ಅಧಿಸೂಚನೆಯ ಕೊನೆಯಲ್ಲಿ ತೋರಿಸಲಾಗಿದೆ).

**13. ಅಂಗವಿಕಲ ಅಭ್ಯರ್ಥಿ :–**

- ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 50 ಎಸ್‌ಆರ್‌ಆರ್ 2000 ದಿನಾಂಕ: 03–09–2005 ರಲ್ಲಿ ರಾಜ್ಯ ಸಿವಿಲ್ ಸೇವೆಗಳ ಸಮೂಹ–'ಎ' ಮತ್ತು 'ಬಿ' ಗುಂಪಿನ ಹುದ್ದೆಗಳಿಗೆ ಶೇಕಡ 3 ರಷ್ಟು ಮತ್ತು ಸಮೂಹ 'ಸಿ' ಮತ್ತು 'ಡಿ' ಗುಂಪಿನ ಹುದ್ದೆಗಳಿಗೆ ಶೇಕಡ 5 ರಷ್ಟು ಹುದ್ದೆಗಳನ್ನು ಅಂಗವಿಕಲರಿಗೆ ಮೀಸಲಾತಿ ಕಲ್ಪಿಸಿದ್ದು, ಇದರನ್ವಯ ಶೇಕಡ 40 ಕ್ಕಿಂತ ಕಡಿಮೆ ಇಲ್ಲದಂತಹ ಅಂಗವಿಕಲತೆಯುಳ್ಳ ಅಭ್ಯರ್ಥಿಗಳು ಮಾತ್ರ ಈ ಮೀಸಲಾತಿಯನ್ನು ಕೋರಲು ಅರ್ಹರು. ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ ಸಿಆಸುಇ 115 ಸೇನೆನಿ 2005 ದಿನಾಂಕ: 19–11–2005ರಲ್ಲಿ ನಿಗದಿಪಡಿಸಿರುವ ನಮೂನೆಯಲ್ಲಿ ಅಂಗವಿಕಲತೆ ಬಗ್ಗೆ ಸರ್ಕಾರದ ಆದೇಶ ಸಂಖ್ಯೆ: ಮಮಇ 65 ಪಿಹೆಚ್‌ಪಿ 2010 ದಿನಾಂಕ: 18–02–2011 ರಂತೆ ಪ್ರಾಥಮಿಕ ಆರೋಗ್ಯ ಕೇಂದ್ರದಲ್ಲಿಯ ವೈದ್ಯಕೀಯ ಪ್ರಾಧಿಕಾರ/ ತಾಲ್ಲೂಕು ಮಟ್ಟದ ವೈದ್ಯಕೀಯ ಪ್ರಾಧಿಕಾರ/ಜಿಲ್ಲಾ ಮಟ್ಟದ ವೈದ್ಯಕೀಯ ಪ್ರಾಧಿಕಾರ/ಬೆಂಗಳೂರು ವೈದ್ಯಕೀಯ ಪ್ರಾಧಿಕಾರ ಇವರಿಂದ ಪ್ರಮಾಣ ಪತ್ರವನ್ನು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ಪಡೆದಿಟ್ಟುಕೊಂಡಿರತಕ್ಕದ್ದು. ಮೂಲ ದಾಖಲಾತಿಗಳ ಪರಿಶೀಲನೆಗೆ ಈ ಪ್ರಮಾಣ ಪತ್ರದ ಮೂಲ ಪ್ರತಿಯನ್ನು ಪರಿಶೀಲನೆಗೆ ತಪ್ಪದೇ ಹಾಜರುಪಡಿಸತಕ್ಕದ್ದು, ತಪ್ಪಿದಲ್ಲಿ ಅಂತಹ ಅಭ್ಯರ್ಥಿಗಳ ಅಂಗವಿಕಲ ಮೀಸಲಾತಿಯನ್ನು ರದ್ದುಪಡಿಸಲಾಗುವುದು. ಇತರೆ ಯಾವುದೇ ನಮೂನೆಯಲ್ಲಿ ಅಂಗವಿಕಲತೆಯ ಬಗ್ಗೆ ಪಡೆಯಲಾಗಿರುವ ಪ್ರಮಾಣ ಪತ್ರಗಳನ್ನು/ಗುರುತಿನ ಚೀಟಿಯ ಪ್ರತಿಗಳನ್ನು ಪರಿಗಣಿಸಲು ಬರುವುದಿಲ್ಲ. (ಈ ಪ್ರಮಾಣ ಪತ್ರದ ನಮೂನೆಯನ್ನು ಅಧಿಸೂಚನೆಯ ಕೊನೆಯಲ್ಲಿ ತೋರಿಸಲಾಗಿದೆ).
- ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕ ಸಬಲೀಕರಣ ಇಲಾಖೆರವರ ಅಧಿಸೂಚನೆ ಸಂ:ಡಬ್ಲ್ಯೂಸಿಡಿ 261 ಪಿಹೆಚ್‌ಪಿ 2015, ದಿನಾಂಕ:20.01.2016ರ ಪ್ರಕಾರ ದೃಷ್ಟಿ ಮಾಂದ್ಯ (Low vision(LV)), ಶ್ರವಣ ದೋಷ (Hearing impairment), ಚಲನವಲನ ವೈಕಲ್ಯ{Locomotor disability (OA, OL, BL, OAL)} ಇರುವ ಅಂಗವಿಕಲರಿಗೆ ಮೀಸಲಾತಿ ಕಲ್ಪಿಸಿದ್ದು, ಇದರನ್ವಯ ಶೇ.40ಕ್ಕಿಂತ ಕಡಿಮೆ ಇಲ್ಲದಂತಹ ಅಂಗವಿಕಲತೆಯುಳ್ಳ ಅಭ್ಯರ್ಥಿಗಳು ಮಾತ್ರ ಈ ಮೀಸಲಾತಿಯನ್ನು ಕೋರಲು ಅರ್ಹರು.

**14.** ಸ್ಪರ್ಧಾತ್ಮಕ ಪರೀಕ್ಷೆಗಳನ್ನು ಬೆಂಗಳೂರು/ಮೈಸೂರು/ಬೆಳಗಾವಿ/ಕಲಬುರಗಿ ಜಿಲ್ಲಾ ಕೇಂದ್ರಗಳಲ್ಲಿ ಅಥವಾ ಪ್ರಾಧಿಕಾರವು ನಿಗದಿಪಡಿಸುವ ಇತರೆ ಯಾವುದೇ ಕೇಂದ್ರ ಸ್ಥಳದಲ್ಲಿ ನಡೆಸಲಾಗುವುದು. ಅಭ್ಯರ್ಥಿಗಳು ಅರ್ಜಿ ನಮೂನೆಯಲ್ಲಿ ಅವರು ಸ್ಪರ್ಧಾತ್ಮಕ ಪರೀಕ್ಷೆ ತೆಗೆದುಕೊಳ್ಳಲು ಇಚ್ಛಿಸುವ ಪರೀಕ್ಷಾ ಕೇಂದ್ರವನ್ನು ನಮೂದಿಸತಕ್ಕದ್ದು. ಪರೀಕ್ಷಾ ಕೇಂದ್ರವನ್ನು ನಿಗದಿಪಡಿಸುವುದು ಪ್ರಾಧಿಕಾರದ ಅಂತಿಮ ತೀರ್ಮಾನವಾಗಿರುತ್ತದೆ. **ಕಡ್ಡಾಯ ಕನ್ನಡ ಭಾಷೆ ಪರೀಕ್ಷೆ ತೆಗೆದುಕೊಳ್ಳುವ ಅಭ್ಯರ್ಥಿಗಳು ಕನ್ನಡ ಭಾಷೆ ಪರೀಕ್ಷೆ ಮತ್ತು ಸ್ಪರ್ಧಾತ್ಮಕ ಪರೀಕ್ಷೆಗೆ ಬೆಂಗಳೂರು ಕೇಂದ್ರವನ್ನು ಮಾತ್ರ ಆಯ್ಕೆ ಮಾಡಿಕೊಳ್ಳತಕ್ಕದ್ದು.**

ಸ್ಪರ್ಧಾತ್ಮಕ ಪರೀಕ್ಷೆ ಮತ್ತು ಕಡ್ಡಾಯ ಕನ್ನಡ ಭಾಷೆ ಪರೀಕ್ಷೆಗಳನ್ನು ಸಂಭವನೀಯವಾಗಿ 2017ನೇ ಸಾಲಿನ ಮಾರ್ಚ್ ಮಾಹೆಯಲ್ಲಿ ನಡೆಸಲಾಗುವುದು. ಪರೀಕ್ಷಾ ವೇಳಾಪಟ್ಟಿಯನ್ನು ಇಲಾಖೆಯ ಅಂತರ್ಜಾಲ"**http://raitamitra.kar.nic.in**" ನಲ್ಲಿ ನೋಡಬಹುದು.

ಆಯಾ ಹುದ್ದೆಗಳಿಗೆ ಮೂಲ ದಾಖಲೆಗಳ ಪರಿಶೀಲನೆಯ ದಿನಾಂಕ ನಿಗದಿಪಡಿಸಿದಾಗ ಅರ್ಹತಾ ಪಟ್ಟಿಯನ್ನು ಇಲಾಖೆಯ ಅಂತರ್ಜಾಲದಲ್ಲಿ ಬಿತ್ತರಿಸಲಾಗುವುದು. ಈ ಬಗ್ಗೆ ಪತ್ರಿಕೆಗಳಲ್ಲಿ ಪ್ರಕಟಣೆ ಹಾಗೂ ಟಿಪ್ಪಣಿ ಮೂಲಕ ಮಾಹಿತಿ ನೀಡಲಾಗುವುದು/ಇ–ಮೇಲ್ ಮೂಲಕ ಸಂದೇಶ ನೀಡಲಾಗುವುದು. ಅರ್ಹ ಅಭ್ಯರ್ಥಿಗಳು ಸೂಚನಾ ಪತ್ರಗಳನ್ನು ಇಲಾಖೆಯ ವೆಬ್‌ಸೈಟ್‌ನಿಂದ ಡೌನ್‌ಲೋಡ್ ಮಾಡಿಕೊಂಡು ನಿಗದಿತ ಸ್ಥಳ/ದಿನಾಂಕ/ಸಮಯಕ್ಕೆ ಮೂಲ ದಾಖಲಾತಿಗಳೊಂದಿಗೆ ಪರಿಶೀಲನೆಗೆ ಇಲಾಖೆಯ ಕಛೇರಿಯಲ್ಲಿ ಹಾಜರಾಗತಕ್ಕದ್ದು.

**15. ಇಲಾಖೆಯೊಡನೆ ಪತ್ರ ವ್ಯವಹಾರ :**

ಇಲಾಖೆಯು ಅಭ್ಯರ್ಥಿಗಳೊಂದಿಗೆ ಯಾವುದೇ ಪತ್ರ ವ್ಯವಹಾರವನ್ನು ನಡೆಸುವುದಿಲ್ಲ. ಆದುದರಿಂದ, ಅಭ್ಯರ್ಥಿಗಳು ಅರ್ಜಿ ಭರ್ತಿ ಮಾಡುವಾಗ ಜಾಗರೂಕತೆಯಿಂದ ಭರ್ತಿ ಮಾಡತಕ್ಕದ್ದು.

ವಿಳಾಸ ಬದಲಾವಣೆ ಇದ್ದಲ್ಲಿ ಮಾತ್ರ ಅಭ್ಯರ್ಥಿಗಳು ಲಿಖಿತ ಮನವಿಯ ಮೂಲಕ ಇಲಾಖೆಯ ಗಮನಕ್ಕೆ ತರತಕ್ಕದ್ದು. ಈ ವಿಳಾಸ ಬದಲಾವಣೆಯನ್ನು ಪರಿಗಣಿಸಲು ಇಲಾಖೆಯು ಪ್ರಯತ್ನಿಸುವುದು. ಆದಾಗ್ಯೂ ಈ ವಿಚಾರದಲ್ಲಿ ಇಲಾಖೆಯು ಯಾವುದೇ ಜವಾಬ್ದಾರಿಯನ್ನು ವಹಿಸಿಕೊಳ್ಳುವುದಿಲ್ಲ. ಈ ಬಗ್ಗೆ ಅಭ್ಯರ್ಥಿಗಳು ಎಚ್ಚರ ವಹಿಸತಕ್ಕದ್ದು. ಅಭ್ಯರ್ಥಿಗಳು ಇಲಾಖೆಯೊಡನೆ ಸಂಪರ್ಕಿಸಲೇಬೇಕಾದ ಸಂದರ್ಭದಲ್ಲಿ ತಮ್ಮ ಮನವಿಯಲ್ಲಿ ಈ ಕೆಳಕಂಡ ಮಾಹಿತಿಗಳು ಒಳಗೊಂಡಿರಬೇಕು

(i) ಹುದ್ದೆಯ / ವಿಷಯದ ಹೆಸರು

(ii) ಅಭ್ಯರ್ಥಿಯ ಪೂರ್ಣ ಹೆಸರು (ಬಿಡಿ ಅಕ್ಷರಗಳಲ್ಲಿ)

(iii) ಅರ್ಜಿಯಲ್ಲಿ ನಮೂದಿಸಿರುವ ಅಂಚೆ ವಿಳಾಸ

**16. ಪ್ರಾಮುಖ್ಯವಾದ ಸೂಚನೆಗಳು :–**

ಅಭ್ಯರ್ಥಿಯ ಇತ್ತೀಚಿನ ಪಾಸ್‌ಪೋರ್ಟ್ ಅಳತೆಯ ಭಾವಚಿತ್ರವನ್ನು ಹಾಗೂ ಕಪ್ಪು ಶಾಹಿಯ ಸ್ಕೆಚ್/ಮಾರ್ಕರ್ ಪೆನ್‌ಲ್ಲಿ ಸಹಿಯನ್ನು ನಿಗದಿಪಡಿಸಿದ ಅಳತೆಯಲ್ಲಿ ಸ್ಕ್ಯಾನ್ ಮಾಡಿ ಅರ್ಜಿಗೆ UPLOAD ಮಾಡಬೇಕು. ಭಾವಚಿತ್ರ ಹಾಗೂ ಸಹಿಯನ್ನು UPLOAD ಮಾಡದ ಅರ್ಜಿಗಳು ತಿರಸ್ಕೃತಗೊಳ್ಳುತ್ತವೆ. ಈ ಕೆಳಕಂಡ ಪ್ರಮಾಣ ಪತ್ರಗಳನ್ನು ನಿಗದಿತ ನಮೂನೆಯಲ್ಲಿ ON LINE ಮೂಲಕ ಅರ್ಜಿ ಭರ್ತಿ ಮಾಡಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ಸಂಬಂಧಪಟ್ಟ ಪ್ರಾಧಿಕಾರಿಗಳಿಂದ ಪಡೆದಿಟ್ಟುಕೊಂಡು ವಯೋಮಿತಿ/ವಿದ್ಯಾರ್ಹತೆಗೆ ಸಂಬಂಧಿಸಿದ ದಾಖಲೆಗಳನ್ನು ಮೂಲ ದಾಖಲಾತಿಯ ಪರಿಶೀಲನೆಗೆ ಅರ್ಹರಾದಾಗ ಆ ಸಮಯದಲ್ಲಿ ಅದೇ ಮೀಸಲಾತಿ ಪ್ರಮಾಣ ಪತ್ರದ ಹಾಗೂ ಇತರೇ ಪ್ರಮಾಣ ಪತ್ರಗಳ ಮೂಲ ಪ್ರತಿಯನ್ನು ಪರಿಶೀಲನೆಗೆ ಹಾಜರುಪಡಿಸಬೇಕು. ಅರ್ಜಿ ಭರ್ತಿ ಮಾಡಲು ನಿಗದಿಪಡಿಸಿದ ಕೊನೆಯ ದಿನಾಂಕದ ನಂತರ ಪಡೆದ ಯಾವುದೇ ಪ್ರಮಾಣ ಪತ್ರಗಳನ್ನು ಪರಿಗಣಿಸಲಾಗುವುದಿಲ್ಲ ಹಾಗೆಯೇ ಯಾವುದೇ ಮೀಸಲಾತಿ ಪ್ರಮಾಣ ಪತ್ರಗಳನ್ನು ನಿಗದಿಪಡಿಸಿರುವ ನಮೂನೆಗಳಲ್ಲಿರದಿದ್ದಲ್ಲಿ ಮತ್ತು ತಪ್ಪಿದ್ದಲ್ಲಿ ಸದರಿ ಮೀಸಲಾತಿಯನ್ನು ತಿರಸ್ಕರಿಸಲಾಗುವುದು / ಅಭ್ಯರ್ಥಿತ್ವವನ್ನು ಅನರ್ಹಗೊಳಿಸಲಾಗುವುದು.

1. ಹುದ್ದೆಗೆ ನಿಗದಿಪಡಿಸಿದ ಶುಲ್ಕವನ್ನು ಕೆನರಾ ಬ್ಯಾಂಕ್‌ನಲ್ಲಿ ಪಾವತಿಸಿದ ಚಲನ್/ವಿವರದ ಪ್ರತಿ.
2. ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ಹುದ್ದೆಗಳಿಗೆ ನಿಗದಿಪಡಿಸಲಾದ ವಿದ್ಯಾರ್ಹತೆಯನ್ನು ಪಡೆದಿರುವ ಬಗ್ಗೆ ಎಲ್ಲಾ ವರ್ಷಗಳ/ಸೆಮಿಸ್ಟರ್‌ಗಳ ಅಂಕಪಟ್ಟಿಗಳು ಹಾಗೂ ಘಟಿಕೋತ್ಸವದ ಪ್ರಮಾಣ ಪತ್ರಗಳು/ಪಿಡಿಸಿ/ ಗ್ರೇಡ್‌ನ್ನು ಶೇಕಡವಾರು ಅಂಕಗಳಿಗೆ ಪರಿವರ್ತಿಸಿದ ವಿಶ್ವವಿದ್ಯಾಲಯದಿಂದ ಪಡೆದ ಪ್ರಮಾಣ ಪತ್ರ
3. ಜನ್ಮ ದಿನಾಂಕವನ್ನು ನಮೂದಿಸಿರುವ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರ.
4. ಸೈನಿಕ ಸೇವೆಯಿಂದ ಬಿಡುಗಡೆಯಾದ ಪ್ರಮಾಣ ಪತ್ರ ಮತ್ತು ಪಿಂಚಣಿ/ಗ್ರಾಚ್ಯುಟಿ ಪಡೆಯುತ್ತಿರುವ ಪ್ರಮಾಣ ಪತ್ರ/ಮಾಜಿ ಸೈನಿಕ ಅವಲಂಬಿತರಾಗಿದ್ದಲ್ಲಿ, ಮಾಜಿ ಸೈನಿಕರು ಸೇವೆಯಲ್ಲಿರುವಾಗ ಮೃತಪಟ್ಟಿದ್ದಲ್ಲಿ ಅಥವಾ ಖಾಯಂ ಆಗಿ ಗಾಯಗೊಂಡಿರುವ ಪ್ರಮಾಣ ಪತ್ರ ಅನುಬಂಧಿಸಿರುವ ನಮೂನೆಯಲ್ಲಿ(ಮಾಜಿ ಸೈನಿಕ ಮೀಸಲಾತಿ ಕೋರಿದ್ದಲ್ಲಿ)
5. ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, ಪ್ರವರ್ಗ–2ಎ, ಪ್ರವರ್ಗ–2ಬಿ, ಪ್ರವರ್ಗ–3ಎ ಮತ್ತು ಪ್ರವರ್ಗ–3ಬಿ ಮೀಸಲಾತಿ ಪ್ರಮಾಣ ಪತ್ರಗಳು ಪ್ರಸ್ತುತ ಚಾಲ್ತಿಯಲ್ಲಿರುವ ನಮೂನೆಗಳಲ್ಲಿ (ಮೀಸಲಾತಿ ಕೋರಿದ್ದಲ್ಲಿ)
6. ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರ ನಮೂನೆ–1 ಮತ್ತು 2ರಲ್ಲಿ (ಸಾಮಾನ್ಯ ಅರ್ಹತೆ/ಗ್ರಾಮೀಣ ಮೀಸಲಾತಿ ಕೋರಿದ ಅಭ್ಯರ್ಥಿಗಳು) (ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ/ಪ್ರವರ್ಗ–1/ಪ್ರವರ್ಗ–2ಎ/ಪ್ರವರ್ಗ–2ಬಿ/ ಪ್ರವರ್ಗ–3ಎ/ ಪ್ರವರ್ಗ–3ಬಿ ಮೀಸಲಾತಿಯೊಂದಿಗೆ ಗ್ರಾಮೀಣ ಮೀಸಲಾತಿ ಕೋರಿದ ಅಭ್ಯರ್ಥಿಗಳು ನಮೂನೆ–2 ರಲ್ಲಿ ಮಾತ್ರ)
7. ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಪ್ರಮಾಣ ಪತ್ರ (ಮೀಸಲಾತಿ ಕೋರಿದ್ದಲ್ಲಿ)
8. ಅಂಗವಿಕಲ ಮೀಸಲಾತಿ ಪ್ರಮಾಣ ಪತ್ರ (ಮೀಸಲಾತಿ ಕೋರಿದ್ದಲ್ಲಿ)
9. ಸೇವಾನುಭವ ಪ್ರಮಾಣ ಪತ್ರಗಳು (ನಿಗದಿಪಡಿಸಿದಲ್ಲಿ)
10. ಸರ್ಕಾರಿ ಸೇವೆಯಲ್ಲಿರುವ/ಸೇವೆ ಸಲ್ಲಿಸಿದ ಅಭ್ಯರ್ಥಿಗಳು ನಿರಾಕ್ಷೇಪಣೆ/ ಸೇವಾ ಪ್ರಮಾಣ ಪತ್ರ

**17. ವಿಶೇಷ ಸೂಚನೆಗಳು :–**

(1) ON LINE ಮೂಲಕ ಅರ್ಜಿ ಸಲ್ಲಿಸುವಾಗ ಎಲ್ಲಾ ಮಾಹಿತಿಗಳನ್ನು ಸರಿಯಾಗಿ ಭರ್ತಿ ಮಾಡಿರುವ ಬಗ್ಗೆ ಖಚಿತಪಡಿಸಿಕೊಂಡು ನಂತರ ಅದರ ಒಂದು ಪ್ರತಿಯನ್ನು ಡೌನ್‌ಲೋಡ್ ಮಾಡಿಕೊಂಡು ಮತ್ತು ಶುಲ್ಕ ಪಾವತಿಯ ಚಲನ್ ಅನ್ನು ನೇಮಕಾತಿ ಪ್ರಕ್ರಿಯೆ ಮುಗಿಯುವವರೆಗೂ ಭದ್ರವಾಗಿ ತೆಗೆದಿಟ್ಟುಕೊಂಡಿರತಕ್ಕದ್ದು.

(2) ಈಗಾಗಲೇ ಸರ್ಕಾರಿ ಸೇವೆಯಲ್ಲಿರುವ/ಸೇವೆ ಸಲ್ಲಿಸಿದ ಅಭ್ಯರ್ಥಿಗಳು ಅವರುಗಳ ನೇಮಕಾತಿ ಪ್ರಾಧಿಕಾರಿಗಳಿಂದ ಅರ್ಜಿ ಸಲ್ಲಿಸಲು ಕೊನೆಯ ದಿನಾಂಕದೊಳಗೆ ನಿಗದಿತ ನಮೂನೆಯಲ್ಲಿ ಅನುಮತಿಯನ್ನು/ಸೇವಾ ಪ್ರಮಾಣ ಪತ್ರವನ್ನು ಪಡೆದಿಟ್ಟುಕೊಂಡಿರತಕ್ಕದ್ದು ಹಾಗೂ ಸೇವಾ ವಿವರಗಳನ್ನು ಅರ್ಜಿಯಲ್ಲಿ ನಮೂದಿಸಬೇಕು. ಮೂಲ ದಾಖಲಾತಿಯ ಪರಿಶೀಲನೆಯ ಸಮಯದಲ್ಲಿ ಮೂಲ ನಿರಾಕ್ಷೇಪಣೆ/ಸೇವಾ ಪ್ರಮಾಣ ಪತ್ರವನ್ನು ಹಾಜರುಪಡಿಸತಕ್ಕದ್ದು ತಪ್ಪಿದ್ದಲ್ಲಿ ಅನರ್ಹಗೊಳಿಸಲಾಗುವುದು. ಕ್ರೋಡಿಕೃತ ನಿರಾಕ್ಷೇಪಣೆ ಪ್ರಮಾಣ ಪತ್ರ ಪಡೆದಂತಹ ಅಭ್ಯರ್ಥಿಗಳು ಅವರ ನೇಮಕಾತಿ ಪಾಧ್ರಿಕಾರದ ಸಹಿ/ಮೊಹರುನೊಂದಿಗೆ ದೃಢೀಕರಣ ಪಡೆದು ಸಲ್ಲಿಸಬೇಕು.

(3) ಶುಲ್ಕ ಪಾವತಿಸಲು ಕೊನೆಯ ದಿನಾಂಕವು ಸಾರ್ವತ್ರಿಕ ರಜಾ ದಿನವಾಗಿ ಘೋಷಿಸಲ್ಪಟ್ಟರೆ ಆ ದಿನಾಂಕದ ಮಾರನೆಯ ಕೆಲಸದ ದಿನವು ಕೊನೆಯ ದಿನಾಂಕವಾಗುವುದು.

**18. ಹೆಚ್ಚಿನ ಮಾಹಿತಿಗಾಗಿ ದೂರವಾಣಿ ಸಂಖ್ಯೆಗಳು :–**

ಇಲಾಖೆಯ ಕೇಂದ್ರ ಕಛೇರಿ: 080–22074107

ಕರ್ನಾಟಕ ಪರೀಕ್ಷಾ ಪ್ರಾಧಿಕಾರ: 080–23460460

**19. ದುರ್ನಡತೆ :–**

ಒಬ್ಬ ಅಭ್ಯರ್ಥಿಯು ನಕಲಿ ವ್ಯಕ್ತಿಯಾಗಿರುವನೆಂದು ಅಥವಾ ಖೋಟಾ ದಸ್ತಾವೇಜು ಅಥವಾ ತಿದ್ದಲಾದ ದಸ್ತಾವೇಜುಗಳನ್ನು ಸಲ್ಲಿಸಿರುವನೆಂದು ಅಥವಾ ತಪ್ಪು ಅಥವಾ ಸುಳ್ಳು ಹೇಳಿಕೆ ನೀಡಿರುವನೆಂದು ಅಥವಾ ವಾಸ್ತವಿಕ ಮಾಹಿತಿಯನ್ನು ಮರೆಮಾಚಿರುವನೆಂದು ಅಥವಾ ನೇಮಕಾತಿ ಉದ್ದೇಶಗಳಿಗಾಗಿ ನಡೆಸಲಾದ ಪರೀಕ್ಷೆಯಲ್ಲಿ/ಸಂದರ್ಶನದಲ್ಲಿ ಅನುಚಿತ ಮಾರ್ಗವನ್ನು ಅನುಸರಿಸುತ್ತಿರುವನೆಂದು ಅಥವಾ ಅನುಸರಿಸಲು ಪ್ರಯತ್ನಿಸಿರುವನೆಂದು ಅಥವಾ ಅವರ ನೇಮಕಾತಿಯ ಸಂಬಂಧದಲ್ಲಿ ಯಾವುದೇ ಇತರೆ ಅಕ್ರಮ ಮತ್ತು ಅನುಚಿತ ಮಾರ್ಗವನ್ನು ಅವಲಂಬಿಸಿರುವನೆಂದು, ಕಂಡುಬಂದಲ್ಲಿ ಅವನು/ಅವಳು ಸ್ವತ: ಕ್ರಿಮಿನಲ್ ವ್ಯವಹರಣೆಗಳಿಗೆ ಮತ್ತು ಶಿಸ್ತು ಕ್ರಮಕ್ಕೆ ಒಳಪಡುವುದಲ್ಲದೆ; ಹುದ್ದೆಯ ಆಯ್ಕೆಯಿಂದ ಅಭ್ಯರ್ಥಿತ್ವವನ್ನು ರದ್ದುಪಡಿಸಲಾಗುವುದು.

**ಕೃಷಿ ಆಯುಕ್ತರು ಹಾಗೂ ಅಧ್ಯಕ್ಷರು**
ರಾಜ್ಯ ಮಟ್ಟದ ಆಯ್ಕೆ ಸಮಿತಿ

**ಅನುಬಂಧ–4**

**(ಹುದ್ದೆಗಳ ವರ್ಗೀಕರಣ)**

**1. ಸಹಾಯಕ ಕೃಷಿ ನಿರ್ದೇಶಕರ ಹುದ್ದೆಗಳ ವರ್ಗೀಕರಣ(ಉಳಿಕೆ ವೃಂದ) ಹುದ್ದೆಗಳ ಸಂಖ್ಯೆ:53**

| ಹುದ್ದೆಗಳ ಅನುಕ್ರಮ ಸಂಖ್ಯೆ | ಹುದ್ದೆಯ ಪದನಾಮ ಮತ್ತು ಸಂಖ್ಯೆ | ವೇತನ ಶ್ರೇಣಿ | ಹುದ್ದೆಗೆ ನಿಗದಿಪಡಿಸಲಾದ ವಿದ್ಯಾರ್ಹತೆ | ವಯೋ ಮಿತಿ (ವಯಸ್ಸು ವರ್ಷಗಳಲ್ಲಿ) | ಹುದ್ದೆಗಳ ವರ್ಗೀಕರಣ |
|---|---|---|---|---|---|
| 1 | 2 | 3 | 4 | 5 | 6 |
| | ಸಹಾಯಕ ಕೃಷಿ ನಿರ್ದೇಶಕರು 53 | ₹. 28100–50100 | ಭಾರತದಲ್ಲಿ ಕಾನೂನು ರೀತ್ಯಾ ಸ್ಥಾಪಿಸಲಾದ ಯಾವುದೇ ಕೃಷಿ ವಿಶ್ವ ವಿದ್ಯಾ ನಿಲಯದಿಂದ (ಐ.ಸಿ.ಎ.ಆರ್ ಮಾನ್ಯತೆ ಹೊಂದಿದ) ಸ್ನಾತಕೋತ್ತರ ಎಂ.ಎಸ್ಸಿ(ಕೃಷಿ) ಪದವಿ ಪಡೆದಿರಬೇಕು.<br>Must be holder of Master`s Degree in Agriculture awarded by any University established by Law and accredited to Indian Council of Agricuflture Research (ICAR) | ಕನಿಷ್ಠ – 18<br>ಗರಿಷ್ಠ – 35<br>ಪ್ರ–2ಎ, ಪ್ರ–2ಬಿ, ಪ್ರ–3ಎ, ಪ್ರ–3ಬಿ } 38<br>ಪ.ಜಾ, ಪ.ಪಂ, ಪ್ರ–1 } 40 | (see table below) |

| ಮೀಸಲಾತಿ | ಇ | ಮ | ಗ್ರಾ | ಮಾ.ಸೈ | ಕ.ಮಾ.ಅ | ಅಂ.ವಿ | ಒಟ್ಟು |
|---|---|---|---|---|---|---|---|
| ಪ.ಜಾ | 2 | 2 | 3 | 1 | 1 | – | **9** |
| ಪ.ಪಂ | 1 | – | – | – | – | – | **1** |
| ಪ್ರ–1 | – | 1 | 1 | – | – | – | **2** |
| ಪ್ರ–2ಎ | 3 | 2 | 2 | 1 | – | – | **8** |
| ಪ್ರ–2ಬಿ | – | 1 | 1 | – | – | – | **2** |
| ಪ್ರ–3ಎ | – | 1 | 1 | – | – | – | **2** |
| ಪ್ರ–3ಬಿ | – | 1 | 1 | 1 | – | – | **3** |
| ಸಾ.ಅ | 6 | 9 | 6 | 3 | 1 | 1 **(LV)** | **26** |
| **ಒಟ್ಟು** | **12** | **17** | **15** | **6** | **2** | **1*** | **53** |

**ಸಂಕ್ಷೇಪ :** ಇ – ಇತರೆ / ಮ – ಮಹಿಳೆ / ಗ್ರಾ – ಗ್ರಾಮೀಣ / ಮಾ.ಸೈ – ಮಾಜಿ ಸೈನಿಕ / ಕ.ಮಾ.ಅ. – ಕನ್ನಡ ಮಾಧ್ಯಮ ಅಭ್ಯರ್ಥಿ / ಪ.ಜಾ – ಪರಿಶಿಷ್ಟ ಜಾತಿ / ಪ.ಪಂ. – ಪರಿಶಿಷ್ಟ ಪಂಗಡ / ಪ್ರ – ಪ್ರವರ್ಗ / ಸಾ.ಅ. – ಸಾಮಾನ್ಯ ಅರ್ಹತೆ / ಅಂ.ವಿ – ಅಂಗವಿಕಲ

* **ಅಂಗವಿಕಲರಿಗೆ ಮೀಸಲಿರಿಸಿರುವ ಹುದ್ದೆಗಳ ಅಂಗವಿಕಲತೆಯ ವಿವರ:** Low vision(LV)-ದೃಷ್ಟಿಮಾಂದ್ಯ

**2. ಕೃಷಿ ಅಧಿಕಾರಿ ಹುದ್ದೆಗಳ ವರ್ಗೀಕರಣ (ಉಳಿಕೆ ವೃಂದ) ಹುದ್ದೆಗಳ ಸಂಖ್ಯೆ : 300**

| ಹುದ್ದೆಗಳ ಅನುಕ್ರಮ ಸಂಖ್ಯೆ | ಹುದ್ದೆಯ ಪದನಾಮ ಮತ್ತು ಸಂಖ್ಯೆ | ವೇತನ ಶ್ರೇಣಿ | ಹುದ್ದೆಗೆ ನಿಗದಿಪಡಿಸಲಾದ ವಿದ್ಯಾರ್ಹತೆ | ವಯೋಮಿತಿ (ವಯಸ್ಸು ವರ್ಷಗಳಲ್ಲಿ) | ಹುದ್ದೆಗಳ ವರ್ಗೀಕರಣ |
|---|---|---|---|---|---|
| 1 | 2 | 3 | 4 | 5 | 6 |
| | ಕೃಷಿ ಅಧಿಕಾರಿ 300 | ₹. 22800–43200 | ಭಾರತದಲ್ಲಿ ಕಾನೂನು ರೀತ್ಯಾ ಸ್ಥಾಪಿಸಲಾದ ಯಾವುದೇ ಕೃಷಿ ವಿಶ್ವ ವಿದ್ಯಾ ನಿಲಯದಿಂದ (ಐ.ಸಿ.ಎ.ಆರ್ | ಕನಿಷ್ಠ – 18<br>ಗರಿಷ್ಠ – 35 | (see table below) |

| ಮೀಸಲಾತಿ | ಇ | ಮ | ಗ್ರಾ | ಮಾ.ಸೈ | ಕ.ಮಾ.ಅ | ಅಂ.ವಿ | ಒಟ್ಟು |
|---|---|---|---|---|---|---|---|
| ಪ.ಜಾ | 12 | 13 | 14 | 4 | 3 | 1 **(LV)** | **47** |

| 1 | 2 | 3 | 4 | 5 | 6 |
|---|---|---|---|---|---|
| | | | ಮಾನ್ಯತೆ ಹೊಂದಿದ) ಸ್ನಾತಕೋತ್ತರ ಬಿ.ಎಸ್ಸಿ(ಕೃಷಿ) ಪದವಿ ಪಡೆದಿರಬೇಕು. Must be holder of a Bachelor`s Degree in Agriculture awarded by any Agricultural University established by law and accredited to Indian Council of Agriculture Research (ICAR) | ಪ್ರ–2ಎ, ಪ್ರ–2ಬಿ, ಪ್ರ–3ಎ, ಪ್ರ–3ಬಿ } 38<br>ಪ.ಜಾ, ಪ.ಪಂ, ಪ್ರ–1 } 40 | (see table below) |

| ಮೀಸಲಾತಿ | ಇ | ಮ | ಗ್ರಾ | ಮಾ. ಸೈ | ಕ. ಮಾ.ಅ | ಅಂ.ವಿ | ಒಟ್ಟು |
|---|---|---|---|---|---|---|---|
| ಪ.ಪಂ | 4 | 3 | 1 | 1 | – | – | **9** |
| ಪ್ರ–1 | 2 | 5 | 3 | 1 | – | – | **11** |
| ಪ್ರ–2ಎ | 12 | 15 | 10 | 4 | 2 | 1 (**LV**) | **44** |
| ಪ್ರ–2ಬಿ | 2 | 5 | 4 | 1 | – | – | **12** |
| ಪ್ರ–3ಎ | 2 | 4 | 3 | 1 | – | – | **10** |
| ಪ್ರ–3ಬಿ | 4 | 5 | 3 | 2 | 1 | – | **15** |
| ಸಾ.ಅ | 36 | 48 | 42 | 11 | 9 | 6 **{LV-3/ LD-2/ HI-1}** | **152** |
| **ಒಟ್ಟು** | **74** | **98** | **80** | **25** | **15** | **8*** | **300** |

**ಸಂಕ್ಷೇಪ:** ಇ – ಇತರೆ / ಮ – ಮಹಿಳೆ / ಗ್ರಾ – ಗ್ರಾಮೀಣ / ಮಾ.ಸೈ – ಮಾಜಿ ಸೈನಿಕ / ಕ.ಮಾ.ಅ. – ಕನ್ನಡ ಮಾಧ್ಯಮ ಅಭ್ಯರ್ಥಿ / ಪ.ಜಾ – ಪರಿಶಿಷ್ಟ ಜಾತಿ / ಪ.ಪಂ. – ಪರಿಶಿಷ್ಟ ಪಂಗಡ / ಪ್ರ – ಪ್ರವರ್ಗ / ಸಾ.ಅ. – ಸಾಮಾನ್ಯ ಅರ್ಹತೆ / ಅಂ.ವಿ – ಅಂಗವಿಕಲ

* **ಅಂಗವಿಕಲರಿಗೆ ಮೀಸಲಿರಿಸಿರುವ ಹುದ್ದೆಗಳ ಅಂಗವಿಕಲತೆಯ ವಿವರ :** Low vision(LV)–ದೃಷ್ಟಿಮಾಂದ್ಯ, Hearing impairment(HI)-ಶ್ರವಣದೋಷ, Locomotor disability{LD **(**OA, OL, BL, OAL)}-ಚಲನ ವಲನ ವೈಕಲ್ಯ

**3. ಸಹಾಯಕ ಕೃಷಿ ಅಧಿಕಾರಿ ಹುದ್ದೆಗಳ ವರ್ಗೀಕರಣ (ಉಳಿಕೆ ವೃಂದ) ಹುದ್ದೆಗಳ ಸಂಖ್ಯೆ : 43**

| ಹುದ್ದೆಗಳ ಅನುಕ್ರಮ ಸಂಖ್ಯೆ | ಹುದ್ದೆಯ ಪದನಾಮ ಮತ್ತು ಸಂಖ್ಯೆ | ವೇತನ ಶ್ರೇಣಿ | ಹುದ್ದೆಗೆ ನಿಗದಿಪಡಿಸಲಾದ ವಿದ್ಯಾರ್ಹತೆ | ವಯೋ ಮಿತಿ (ವಯಸ್ಸು ವರ್ಷಗಳಲ್ಲಿ) | ಹುದ್ದೆಗಳ ವರ್ಗೀಕರಣ |
|---|---|---|---|---|---|
| 1 | 2 | 3 | 4 | 5 | 6 |
| | ಸಹಾಯಕ ಕೃಷಿ ಅಧಿಕಾರಿ 43 | ₹. 21600–40050 | ಭಾರತದಲ್ಲಿ ಕಾನೂನು ರೀತ್ಯಾ ಸ್ಥಾಪಿಸಲಾದ ಯಾವುದೇ ಕೃಷಿ ವಿಶ್ವ ವಿದ್ಯಾ ನಿಲಯದಿಂದ (ಐ.ಸಿ.ಎ.ಆರ್ ಮಾನ್ಯತೆ ಹೊಂದಿದ) ಸ್ನಾತಕೋತ್ತರ ಬಿ.ಎಸ್ಸಿ(ಕೃಷಿ) ಪದವಿ ಪಡೆದಿರಬೇಕು. **Must be holder of a Bachelor's Degree in Agriculture awarded by any Agricultural University established by law and accredited to Indian Council of Agriculture Research (ICAR)** | ಕನಿಷ್ಠ – 18<br>ಗರಿಷ್ಠ – 35<br>ಪ್ರ–2ಎ, ಪ್ರ–2ಬಿ, ಪ್ರ–3ಎ, ಪ್ರ–3ಬಿ } 38<br>ಪ.ಜಾ, ಪ.ಪಂ, ಪ್ರ–1 } 40 | (see table below) |

| ಮೀಸಲಾತಿ | ಇ | ಮ | ಗ್ರಾ | ಮಾ.ಸೈ | ಕ. ಮಾ.ಅ | ಅಂ.ವಿ | ಒಟ್ಟು |
|---|---|---|---|---|---|---|---|
| ಪ.ಜಾ | 2 | 2 | 5 | – | – | – | **9** |
| ಪ.ಪಂ | 1 | – | – | – | – | – | **1** |
| ಪ್ರ–1 | – | 1 | – | – | – | – | **1** |
| ಪ್ರ–2ಎ | 1 | 2 | 2 | – | – | **1 (LV)** | **6** |
| ಪ್ರ–2ಬಿ | 2 | 1 | 1 | – | – | – | **4** |
| ಪ್ರ–3ಎ | 1 | – | – | – | – | – | **1** |
| ಪ್ರ–3ಬಿ | – | – | – | – | – | – | – |
| ಸಾ.ಅ | 8 | 7 | 4 | – | 2 | – | **21** |
| **ಒಟ್ಟು** | **15** | **13** | **12** | **–** | **2** | **1*** | **43** |

**ಸಂಕ್ಷೇಪ :** ಇ – ಇತರೆ / ಮ – ಮಹಿಳೆ / ಗ್ರಾ – ಗ್ರಾಮೀಣ / ಮಾ.ಸೈ – ಮಾಜಿ ಸೈನಿಕ / ಕ.ಮಾ.ಅ. – ಕನ್ನಡ ಮಾಧ್ಯಮ ಅಭ್ಯರ್ಥಿ / ಪ.ಜಾ – ಪರಿಶಿಷ್ಟ ಜಾತಿ / ಪ.ಪಂ. – ಪರಿಶಿಷ್ಟ ಪಂಗಡ / ಪ್ರ – ಪ್ರವರ್ಗ / ಸಾ.ಅ. – ಸಾಮಾನ್ಯ ಅರ್ಹತೆ / ಅಂ.ವಿ – ಅಂಗವಿಕಲ

* **ಅಂಗವಿಕಲರಿಗೆ ಮೀಸಲಿರಿಸಿರುವ ಹುದ್ದೆಗಳ ಅಂಗವಿಕಲತೆಯ ವಿವರ :** Low vision(LV)–ದೃಷ್ಟಿಮಾಂದ್ಯ

**ಅನುಬಂಧ–1**

**ಪರೀಕ್ಷಾ ಕೇಂದ್ರಗಳು**

| | | |
|---|---|---|
| **1.** | ಬೆಂಗಳೂರು | Bengaluru |
| **2.** | ಮೈಸೂರು | Mysuru |
| **3.** | ಬೆಳಗಾವಿ | Belagavi |
| **4.** | ಕಲಬುರಗಿ | Kalaburagi |

**ಅನುಬಂಧ–2**

**ಪಠ್ಯಕ್ರಮ**

1. **ಪಠ್ಯಕ್ರಮ (ಸಾಮಾನ್ಯ ಜ್ಞಾನ)** :–ಪ್ರಸಕ್ತ ವಿದ್ಯಮಾನಗಳು, ಸಾಮಾನ್ಯ ವಿಜ್ಞಾನ, ಭಾರತೀಯ ಇತಿಹಾಸ, ಭಾರತೀಯ ಭೂಗೋಳ, ಸಮಾಜ ವಿಜ್ಞಾನ, ಸಾಮಾನ್ಯ ಮಿದುಳಿದ ಸಾಮರ್ಥ್ಯ, ಪ್ರತಿದಿನ ಗಮನಿಸುವ ವಿದ್ಯಮಾನಗಳು ಮತ್ತು ಪ್ರಾಯೋಗಿಕ ಜ್ಞಾನ.

2. **ನಿರ್ಧಿಷ್ಟ ಪ್ರಶ್ನೆ ಪತ್ರಿಕೆ :–**

| ಕ್ರ.ಸಂ | **ಪಠ್ಯಕ್ರಮ** | **ಅಂಕಗಳು** |
|---|---|---|
| 1. | ಬೇಸಾಯ ಶಾಸ್ತ್ರ (Agronomy) | **36** |
| 2. | ಕೃಷಿ ಅರ್ಥಶಾಸ್ತ್ರ (Agriculture Economics) | **16** |
| 3. | ಕೃಷಿ ಇಂಜಿನಿಯರಿಂಗ್ (Agriculture Engineering) | **12** |
| 4. | ಕೀಟ ಶಾಸ್ತ್ರ (Agriculture Entomology) | **22** |
| 5. | ಕೃಷಿ ವಿಸ್ತರಣೆ (Agriculture Extension) | **12** |
| 6. | ಕೃಷಿ ಸೂಕ್ಷ್ಮ ಜೀವಶಾಸ್ತ್ರ (Agricultural Micro-Biology) | **8** |
| 7. | ಪ್ರಾಣಿ ವಿಜ್ಞಾನ (Animal Science) | **6** |
| 8. | ಜೈವಿಕ ತಂತ್ರಜ್ಞಾನ (Biotechnology) | **4** |
| 9. | ಬೆಳೆ ಶರೀರ ಶಾಸ್ತ್ರ (Crop Physiology) | **4** |
| 10. | ಆಹಾರ ವಿಜ್ಞಾನ ಹಾಗೂ ಪೌಷ್ಟಿಕತೆ (Food Science and Nutrition) | **2** |
| 11. | ಅರಣ್ಯ ಹಾಗೂ ಪರಿಸರ ವಿಜ್ಞಾನ (Forestry and Environmental Science) | **4** |
| 12. | ತೋಟಗಾರಿಕೆ (Horticulture) | **20** |
| 13. | ಸಸ್ಯ ರೋಗಶಾಸ್ತ್ರ (Plant Pathology) | **18** |
| 14. | ಬೀಜ ವಿಜ್ಞಾನ ಹಾಗೂ ತಾಂತ್ರಿಕತೆ (Seed Science and Technology) | **4** |
| 15. | ಮಣ್ಣು ವಿಜ್ಞಾನ ಹಾಗೂ ಕೃಷಿ ರಸಾಯನ ಶಾಸ್ತ್ರ (Soil Science and Agricultural Chemistry) | **16** |
| 16. | ಅನುವಂಶೀಯತೆ ಹಾಗೂ ತಳಿ ಅಭಿವೃದ್ಧಿ (Genetics and Plant Breeding) | **16** |
| | **ಒಟ್ಟು** | **200** |

**ಕಡ್ಡಾಯ ಕನ್ನಡ ಭಾಷಾ ಪರೀಕ್ಷೆ ಪಠ್ಯಕ್ರಮ:–** ಅಧಿಸೂಚನೆ ಸಂ:ಎಜಿಡಿ 28 ಎಎನ್‌ಇ 2015, ದಿನಾಂಕ: 19.11.2016ನ್ನು ನೋಡುವುದು. ಎಸ್.ಎಸ್.ಎಲ್.ಸಿ.ಪರೀಕ್ಷೆಯ ಕನ್ನಡ ಪ್ರಥಮ ಭಾಷೆಯ ಮಟ್ಟದ ವಿವರಣಾತ್ಮಕ ಪತ್ರಿಕೆ.

| **ಕ್ರ.ಸಂ.** | **ಪಠ್ಯಕ್ರಮ** | **ಅಂಕಗಳು** |
|---|---|---|
| 1. | ವಿಷಯದ ಸಮಗ್ರ ಅರ್ಥೈಸುವಿಕೆ | 25 |
| 2. | ಪದ ಪ್ರಯೋಗ | 25 |
| 3. | ವಿಷಯ ಸಂಕ್ಷೇಪಣೆ | 25 |
| 4. | ಪದಜ್ಞಾನ | 25 |
| 5. | ಲಘು ಪ್ರಬಂಧ | 25 |
| 6. | ಇಂಗ್ಲೀಷ್‌ನಿಂದ ಕನ್ನಡಕ್ಕೆ ಭಾಷಾಂತರ | 25 |
| | **ಒಟ್ಟು** | **150** |

**ಅನುಬಂಧ–3**

**(ಮೀಸಲಾತಿ ಪ್ರಮಾಣ ಪತ್ರಗಳು)**

**(ಪ.ಜಾ /ಪ.ಪಂ.ಕ್ಕೆ ಸೇರಿದ ಅಭ್ಯರ್ಥಿಗಳಿಗೆ ಮಾತ್ರ) ನಮೂನೆ–ಡಿ**

**(ನಿಯಮ 3ಎ (2) (3) ನೋಡಿ)**

**ಅನುಸೂಚಿತ ಅಥವಾ ಅನುಸೂಚಿತ ಬುಡಕಟ್ಟುಗಳಿಗೆ (ಪ.ಜಾ/ಪ.ಪಂ) ಸೇರಿದ ಅಭ್ಯರ್ಥಿಗಳಿಗೆ ನೀಡುವ ಪ್ರಮಾಣ ಪತ್ರಗಳ ನಮೂನೆ**

**ಪ್ರಮಾಣ ಪತ್ರ**

.......................................................... ರಾಜ್ಯದ / ಕೇಂದ್ರಾಡಳಿತ ಪ್ರದೇಶದ * ................................ ಜಿಲ್ಲೆಯ / ವಿಭಾಗದ ................................................ ಗ್ರಾಮ / ಪಟ್ಟಣದ * ನಿವಾಸಿಯಾದ ಶ್ರೀ / ಶ್ರೀಮತಿ ................................. ಎಂಬುವವರ ಮಗ / ಮಗಳಾದ ಶ್ರೀ / ಶ್ರೀಮತಿ ................................. ಇವರು ಅನುಸೂಚಿತ ಜಾತಿ/ಅನುಸೂಚಿತ ಬುಡಕಟ್ಟು * ಎಂದು ಮಾನ್ಯ ಮಾಡಲಾಗಿರುವ ಜಾತಿ/ಬುಡಕಟ್ಟಿಗೆ * ಸೇರಿರುತ್ತಾರೆಂದು ಪ್ರಮಾಣೀಕರಿಸಿದೆ.

♦ ಸಂವಿಧಾನ (ಅನುಸೂಚಿತ ಜಾತಿಗಳು) ಆದೇಶ, 1950

♦ ಸಂವಿಧಾನ (ಅನುಸೂಚಿತ ಬುಡಕಟ್ಟುಗಳು) ಆದೇಶ, 1950

♦ ಸಂವಿಧಾನ (ಅನುಸೂಚಿತ ಜಾತಿ) (ಕೇಂದ್ರಾಡಳಿತ ಪ್ರದೇಶಗಳು) ಆದೇಶ, 1950

♦ ಸಂವಿಧಾನ (ಅನುಸೂಚಿತ ಬುಡಕಟ್ಟುಗಳು) (ಕೇಂದ್ರಾಡಳಿತ ಪ್ರದೇಶಗಳು) ಆದೇಶ, 1951

(ಅನುಸೂಚಿತ ಜಾತಿ ಮತ್ತು ಅನುಸೂಚಿತ ಬುಡಕಟ್ಟುಗಳ ಪಟ್ಟಿ (ಮಾರ್ಪಾಡು) ಆದೇಶ 1956, ಮುಂಬಯಿ ತಾಜ್ಯ ಪುನರ್ ರಚನಾ ಅಧಿನಿಯಮ, 1960, ಪಂಜಾಬ್ ರಾಜ್ಯ ಪುನರ್ ರಚನಾ ಅಧಿನಿಯಮ, 1966, ಹಿಮಾಚಲ ಪ್ರದೇಶ ರಾಜ್ಯ ಅಧಿನಿಯಮ, 1970 ಮತ್ತು ಈಶಾನ್ಯ ಪ್ರದೇಶಗಳ (ಪುನರ್ ರಚನಾ ಅಧಿನಿಯಮ, 1971ರ ಮೂಲ ತಿದ್ದುಪಡಿಯಾದಂತೆ)

♦ ಸಂವಿಧಾನ

♦ ಸಂವಿಧಾನ (ಜಮ್ಮು ಮತ್ತು ಕಾಶ್ಮೀರ) ಅನುಸೂಚಿತ ಜಾತಿಗಳ ಆದೇಶ, 1956

♦ ಅನುಸೂಚಿತ ಜಾತಿ ಮತ್ತು ಅನುಸೂಚಿತ ಬುಡಕಟ್ಟುಗಳ (ತಿದ್ದುಪಡಿ) ಅಧಿನಿಯಮ, 1976ರ ಮೂಲಕ ತಿದ್ದುಪಡಿಯಾದಂತೆ ಸಂವಿಧಾನ (ಅಂಡಮಾನ್ ಮತ್ತು ನಿಕೋಬಾರ್ ದ್ವೀಪಗಳ) ಅನುಸೂಚಿತ ಬುಡಕಟ್ಟುಗಳ ಆದೇಶ, 1959.

♦ ಸಂವಿಧಾನ (ದಾದರ್ ಮತ್ತು ನಾಗರಹವೇಲಿ) ಅನುಸೂಚಿತ ಜಾತಿಗಳ ಆದೇಶ 1962

♦ ಸಂವಿಧಾನ (ಪಾಂಡಿಚೇರಿ) ಅನುಸೂಚಿತ ಜಾತಿಗಳ ಆದೇಶ, 1964

♦ ಸಂವಿಧಾನ (ಅನುಸೂಚಿತ ಬುಡಕಟ್ಟುಗಳ) (ಉತ್ತರ ಪ್ರದೇಶ) ಆದೇಶ, 1967

♦ ಸಂವಿಧಾನ (ಗೋವಾ, ದಮನ್ ಮತ್ತು ದೀವ್) ಅನುಸೂಚಿತ ಜಾತಿ/ಬುಡಕಟ್ಟುಗಳ ಆದೇಶ 1988

♦ ಸಂವಿಧಾನ (ನಾಗಾಲ್ಯಾಂಡ್) ಅನುಸೂಚಿತ ಬುಡಕಟ್ಟುಗಳ ಆದೇಶ

2. ಶ್ರೀ/ಶ್ರೀಮತಿ/ಕುಮಾರಿ * ............................................................ ಮತ್ತು /ಅಥವಾ ಅವನ* /ಅವಳ* ಕುಟುಂಬವು ..........................................................................................ರಾಜ್ಯ/ಕೇಂದ್ರಾಡಳಿತ ಪ್ರದೇಶದ ................................................................... ಜಿಲ್ಲಾ/ವಿಭಾಗದ ..........................................ಗ್ರಾಮ/ಪಟ್ಟಣದ ಸಾಮಾನ್ಯ ನಿವಾಸಿ (ಗಳು)

ಸಹಿ..........................................................

ತಹಶೀಲ್ದಾರ್..........................................

ಸ್ಥಳ : ಪದನಾಮ

ದಿನಾಂಕ: ಕಛೇರಿಯ ಮೊಹರಿನೊಂದಿಗೆ

**ರಾಜ್ಯ / ಕೇಂದ್ರಾಡಳಿತ ಪ್ರದೇಶ ***

*** ಅನ್ವಯವಾಗದಿರುವ ಪದಗಳನ್ನು ದಯವಿಟ್ಟು ಬಿಟ್ಟು ಬಿಡಿ / ಹೊಡೆದು ಹಾಕಿ**

**ಸೂಚನೆ:** ಇಲ್ಲಿ ಉಪಯೋಗಿಸಿದ 'ಸಾಮಾನ್ಯ ನಿವಾಸಿಗಳು' ಎಂಬ ಪದಾವಳಿಯು ಪ್ರಜಾ ಪ್ರಾತಿನಿಧ್ಯ ಅಧಿನಿಯಮ, 1950ರ 20ನೇ ಪ್ರಕರಣದಲ್ಲಿರುವ ಅರ್ಥವನ್ನೇ ಹೊಂದಿರುತ್ತದೆ. ಭಾರತ ಸರ್ಕಾರದ ಪತ್ರ ಸಂಖ್ಯೆ: ಬಿಸಿ 12028/2/76–ಎಸ್‌ಸಿಟಿ–1 ಗೃಹ ಮಂತ್ರಾಲಯ ಅನುಸಾರವಾಗಿ, ಅಂಥ ಪ್ರಮಾಣ ಪತ್ರಗಳನ್ನು ನೀಡಲು ಸಕ್ಷಮವಾಗಿರುವುದಕ್ಕಾಗಿ, ಭಾರತ ಸರ್ಕಾರದ (ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ) ಪತ್ರ ಸಂಖ್ಯೆ:13–2–74 ಇಎಸ್‌ಟಿ (ಎಸ್‌ಸಿಟಿ) ದಿನಾಂಕ: 05.08.1975ರಲ್ಲಿ ನಮೂದಿಸಿದ ಪ್ರಾಧಿಕಾರಿಯು, ರಾಷ್ಟ್ರಪತಿಗಳು ಸಂಬಂಧಪಟ್ಟ ಆದೇಶದ ಅಧಿಸೂಚನೆಯನ್ನು ಹೊರಡಿಸಿದ ಸಮಯದಲ್ಲಿ ಪ್ರಮಾಣ ಪತ್ರಕ್ಕಾಗಿ ಅರ್ಜಿ ಸಲ್ಲಿಸಿದ ವ್ಯಕ್ತಿಯು, ತನ್ನ ಖಾಯಂ ವಾಸ ಸ್ಥಳವನ್ನು ಹೊಂದಿದ್ದ ಸ್ಥಳಕ್ಕೆ ಸೇರಿದವರೊಬ್ಬರಾಗಿರತಕ್ಕದ್ದು. ಅದೇ ರೀತಿಯಲ್ಲಿ ಒಂದು ತಾಲ್ಲೂಕಿನ ರೆವಿನ್ಯೂ ಪ್ರಾಧಿಕಾರಿಯು ಇನ್ನೊಂದು ತಾಲ್ಲೂಕಿಗೆ ಸೇರಿದ ವ್ಯಕ್ತಿಗಳಿಗೆ ಸಂಬಂಧಪಟ್ಟ ಪ್ರಮಾಣ ಪತ್ರವನ್ನು ನೀಡಲು ಸಕ್ಷಮ ಪ್ರಾಧಿಕಾರಿಯಾಗುವುದಿಲ್ಲ.

**(ಪ್ರವರ್ಗ–1 ಕ್ಕೆ ಸೇರಿದ ಅಭ್ಯರ್ಥಿಗಳಿಗೆ ಮಾತ್ರ)**

**ನಮೂನೆ – ಇ**

**(ನಿಯಮ 3ಎ (2) (3) ನೋಡಿ)**

**ಹಿಂದುಳಿದ ವರ್ಗಗಳಿಗೆ (ಪ್ರವರ್ಗ–1) ಸೇರಿದ ಅಭ್ಯರ್ಥಿಗಳಿಗೆ ನೀಡುವ ಪ್ರಮಾಣ ಪತ್ರ**

.........................................................................................................................................ಗ್ರಾಮ / ಪಟ್ಟಣದ / ನಗರ ನಿವಾಸಿಯಾದ ಶ್ರೀ/ಶ್ರೀಮತಿ.................................................................................................................ಇವರ ಮಗ / ಮಗಳು / ಪತ್ನಿ / ಪತಿಯಾದ ಶ್ರೀ/ಶ್ರೀಮತಿ.............................................................................................................ಇವರು ಹಿಂದುಳಿದ ವರ್ಗಗಳ (ಪ್ರವರ್ಗ) ........................................................ಜಾತಿಯ .....................................................ಉಪಜಾತಿಗೆ ಸೇರಿರುತ್ತಾರೆಂದು ಪ್ರಮಾಣೀಕರಿಸಲಾಗಿದೆ.

ಸ್ಥಳ : ತಹಶೀಲ್ದಾರ್ ತಾಲ್ಲೂಕು

ದಿನಾಂಕ : ..................... ಕಛೇರಿಯ ಮೊಹರು

**(ಪ್ರವರ್ಗ – 2ಎ, 2ಬಿ, 3ಎ, 3ಬಿ ಗೆ ಸೇರಿದ ಅಭ್ಯರ್ಥಿಗಳಿಗೆ ಮಾತ್ರ)**

**ನಮೂನೆ – ಎಫ್**

**(ನಿಯಮ 3ಎ (2) (3)ನ್ನು ನೋಡಿ)**

**ಹಿಂದುಳಿದ ವರ್ಗಗಳಿಗೆ (2ಎ, 2ಬಿ. 3ಎ, 3ಬಿ) ಸೇರಿದ ಅಭ್ಯರ್ಥಿಗೆ ನೀಡುವ ಆದಾಯ ಮತ್ತು ಜಾತಿ ಪ್ರಮಾಣ ಪತ್ರ**

..........................................ರಲ್ಲಿ ವಾಸವಾಗಿರುವ ಶ್ರೀ / ಶ್ರೀಮತಿ..........................................................................ಇವರ ಮಗ/ಮಗಳು/ಪತಿ/ಪತ್ನಿಯಾದ ಶ್ರೀ/ಶ್ರೀಮತಿ/ಕುಮಾರಿ .......................................ಇವರು ಮತ್ತು ಆತನ/ಅವಳ ತಂದೆ /ತಾಯಿ/ಪೋಷಕರು/ಪತ್ನಿ/ಪತಿಯು, ಸರ್ಕಾರಿ ಆದೇಶಗಳ ಸಂಖ್ಯೆ:ಎಸ್‌ಡಬ್ಲ್ಯೂಡಿ 225 ಬಿಸಿಎ 2000 ದಿನಾಂಕ: 30.03.2002 ರಲ್ಲಿ ನಿರ್ದಿಷ್ಟ ಪಡಿಸಿದ ಮೇಲುಸ್ತರದ (ಕ್ರೀಮಿ ಲೇಯರ್) ವ್ಯಾಪ್ತಿಯಲ್ಲಿ ಬರುವುದಿಲ್ಲವೆಂದು; ಅಭ್ಯರ್ಥಿಯಾಗಲಿ ಅಥವಾ ಆತನ/ಆಕೆಯ ತಂದೆ ತಾಯಿ/ಪೋಷಕರಾಗಲಿ/ಪತ್ನಿ/ಪತಿಯಾಗಲಿ, ಸರ್ಕಾರದ ಸೇವೆಯಲ್ಲಿ 1ನೇ ದರ್ಜೆಯ ಅಥವಾ 2ನೇ ದರ್ಜೆಯ ಅಧಿಕಾರಿಯಾಗಿಲ್ಲವೆಂದು;

**ಅಥವಾ**

ಸಾರ್ವಜನಿಕ ವಲಯ ಉದ್ಯಮಯಲ್ಲಿ ತತ್ಸಮಾನವಾದ ಹುದ್ದೆಯನ್ನು ಹೊಂದಿರುವುದಿಲ್ಲ;

**ಅಥವಾ**

ಖಾಸಗಿ ನಿಯೋಜಕರ ಕೈಕೆಳಗೆ, 2ನೇ ದರ್ಜೆಯ ಅಧಿಕಾರಿಯ ಸಂಬಳಕ್ಕಿಂತ (ವೇತನ ಶ್ರೇಣಿ ₹.6000–12000/– ಪ್ರಾರಂಭಿಕ ಹಂತ) ಕಡಿಮೆಯಲ್ಲದ ಸಂಬಳವನ್ನು ಪಡೆಯುವ ನೌಕರನಾಗಿಲ್ಲವೆಂದು;

**ಅಥವಾ**

ಆತನ/ಆಕೆಯ ತಂದೆ ತಾಯಿ/ ಪೋಷಕರು/ಪತ್ನಿ/ ಪತಿಯ ಆದಾಯವು ಎರಡು ಲಕ್ಷಮೀರುವುದಿಲ್ಲವೆಂದು;

**ಅಥವಾ**

ಕರ್ನಾಟಕ ಭೂ ಸುಧಾರಣಾ ಅಧಿನಿಯಮ 1961 ರಲ್ಲಿ ನಿಗದಿಪಡಿಸಿರುವಂತೆ ಆತನ / ಆಕೆಯ ತಂದೆ/ ತಾಯಿ / ಪೋಷಕರು/ಪತ್ನಿ/ಪತಿಯು ಮಾರಾಟ ತೆರಿಗೆದಾರನಲ್ಲ ಅಥವಾ ಆತನ / ಆಕೆಯ ತಂದೆ ತಾಯಿ / ಪೋಷಕ / ಪತ್ನಿ / ಪತಿಯು ಅಥವಾ ಇವರಿಬ್ಬರೂ 10 ಯುನಿಟ್‌ಗಿಂತ ಹೆಚ್ಚಿನ ಕೃಷಿ ಭೂಮಿ ಅಥವಾ 25 ಎಕರೆಗಳಿಗಿಂತ ಹೆಚ್ಚಿನ ಪ್ಲಾಂಟೇಶನ್ ಭೂಮಿಯನ್ನು ಹೊಂದಿರುವುದಿಲ್ಲವೆಂದು ಪ್ರಮಾಣೀಕರಿಸಲಾಗಿದೆ. ಸರ್ಕಾರಿ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಡಿ 225 ಬಿಸಿಎ 2000 ದಿನಾಂಕ: 30.03.2002ರ ಅನ್ವಯ ಶ್ರೀ/ಶ್ರೀಮತಿ / ಕುಮಾರಿ.............................. ಇವರು ...................... ಜಾತಿಗೆ ....................................... ಸೇರಿದ ಉಪಜಾತಿಯವರಾಗಿದ್ದು ಸರ್ಕಾರಿ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಡಿ 225 ಬಿಸಿಎ 2000 ದಿನಾಂಕ: 30.03.2002ರ ಅನ್ವಯ ಹಿಂದುಳಿದ ವರ್ಗಗಳ ಪ್ರವರ್ಗ ....................................... (2ಎ, 2ಬಿ, 3ಎ, 3ಬಿ)ಕ್ಕೆ ಸೇರಿರುತ್ತಾರೆ.

ಸ್ಥಳ : ತಹಶೀಲ್ದಾರ್

ದಿನಾಂಕ: ......................... ತಾಲ್ಲೂಕು ಕಛೇರಿಯ ಮೊಹರು

**ಸೂಚನೆ :** 1) ಸರ್ಕಾರದ ಆದೇಶ ಸಂಖ್ಯೆ: ಹಿಂವಕ 148 ಬಿಸಿಎ 2015, ದಿನಾಂಕ: 04–06–2015ರಂತೆ ಹಿಂದುಳಿದ ವರ್ಗಗಳ ಪ್ರವರ್ಗ–2ಎ, 2ಬಿ, 3ಎ ಮತ್ತು 3ಬಿ ಮೀಸಲಾತಿಗಳಿಗೆ ಅನ್ವಯಿಸುವಂತೆ ಕೆನೆಪದರಕ್ಕೆ ನಿಗದಿಪಡಿಸಿರುವ ಅಭ್ಯರ್ಥಿಯ ಮತ್ತು ಅವರ ತಂದೆ–ತಾಯಿ, ಪೋಷಕರ ವಾರ್ಷಿಕ ಒಟ್ಟು ಆದಾಯ ಮಿತಿಯನ್ನು (Gross Annual Income) ₹.4.50 ಲಕ್ಷಗಳಿಂದ ₹.6.00 ಲಕ್ಷಗಳಿಗೆ ಹೆಚ್ಚಿಸಲಾಗಿದೆ. ಆದುದರಿಂದ, ಮೀಸಲಾತಿ ಪ್ರಮಾಣಪತ್ರವನ್ನು ನೀಡುವ ಅಧಿಕೃತ ಅಧಿಕಾರಿಯು ದಿನಾಂಕ: 04–06–2015ರ ಸರ್ಕಾರಿ ಆದೇಶದಲ್ಲಿನ ಅಂಶಗಳನ್ನು ವಿವರವಾಗಿ ಖಚಿತಪಡಿಸಿಕೊಂಡ ನಂತರವೇ ನೀಡತಕ್ಕದ್ದು.

2) ಈ ಮೇಲೆ ಹೇಳಲಾದ ಸರ್ಕಾರಿ ಆದೇಶದಲ್ಲಿನ ಅಂಶಗಳನ್ನು ಗಮನದಲ್ಲಿಟ್ಟುಕೊಂಡೇ ಸದರಿ ಮೀಸಲಾತಿಗಳನ್ನು ಕ್ಲೇಮು ಮಾಡುವ ಅಭ್ಯರ್ಥಿಗಳು ಅದರಂತೆ ಜಾತಿ/ ಮೀಸಲಾತಿ ಪ್ರಮಾಣ ಪತ್ರಗಳನ್ನು ಮಾಡಿಸಲು ಸೂಚಿಸಿದೆ.

**ನಮೂನೆ – 1**

**ಜನರಲ್ ಮೆರಿಟ್ ಅಭ್ಯರ್ಥಿಗಳು ಮೇಲುಸ್ತರಕ್ಕೆ ಸೇರಿಲ್ಲವೆಂದು, ದೃಢೀಕರಿಸಿ ಗ್ರಾಮೀಣ ಮೀಸಲಾತಿಯನ್ನು ಕೋರಲು ಸಲ್ಲಿಸಬೇಕಾದ ಪ್ರಮಾಣ ಪತ್ರ**

**(ಜನರಲ್ ಮೆರಿಟ್ ಅಭ್ಯರ್ಥಿಗಳು ಭರ್ತಿ ಮಾಡಬೇಕಾದ ನಮೂನೆ)**

ಇವರಿಗೆ:

ತಹಶೀಲ್ದಾರರು

................................ ತಾಲ್ಲೂಕು

............................. ಜಿಲ್ಲೆ

ಮಾನ್ಯರೆ,

ಶ್ರೀ / ಶ್ರೀಮತಿ............................................. ಎಂಬುವವರ ಮಗ / ಮಗಳು / ಪತಿ / ಪತ್ನಿ...............................................ಆದ ನಾನು ಮೇಲುಸ್ತರದಲ್ಲಿ (Creamy Layer) ಬರುವುದಿಲ್ಲವೆಂದು ನೇರ ನೇಮಕಾತಿಯಲ್ಲಿ ಗ್ರಾಮೀಣ ಅಭ್ಯರ್ಥಿ ಮೀಸಲಾತಿಯನ್ನು ಪಡೆಯುವುದಕ್ಕಾಗಿ ಪ್ರಮಾಣ ಪತ್ರವನ್ನು ಪಡೆಯಲು ತಮ್ಮಲ್ಲಿ ಈ ಕೆಳಕಂಡ ಮಾಹಿತಿಗಳನ್ನು ಒದಗಿಸುತ್ತಾ ಕೋರುತ್ತೇನೆ.

1. ಅಭ್ಯರ್ಥಿಯ ಹೆಸರು ಮತ್ತು ಉದ್ಯೋಗ :

2. ಅಭ್ಯರ್ಥಿಯ ಸ್ವಂತ ಸ್ಥಳ ಗ್ರಾಮ: ತಾಲ್ಲೂಕು : ಜಿಲ್ಲೆ :

3. ಅಭ್ಯರ್ಥಿಯು ಹುಟ್ಟಿದ ದಿನಾಂಕ ವಯಸ್ಸು ಮತ್ತು ಹುಟ್ಟಿದ ಸ್ಥಳ :

4. ಅಭ್ಯರ್ಥಿಯ ತಂದೆ/ತಾಯಿ/ಪೋಷಕರ ಪತಿಯ/ಪತ್ನಿಯ ಹೆಸರು ಮತ್ತು ಉದ್ಯೋಗ : (ಉದ್ಯೋಗವು ಸರ್ಕಾರಿ/ಅರೆ ಸರ್ಕಾರಿ/ಸಾರ್ವಜನಿಕ ಉದ್ಯಮ/ಖಾಸಗಿ)

5. ಅಭ್ಯರ್ಥಿಯ ಪ್ರಸ್ತುತ ವಿಳಾಸ : (ಸ್ಪಷ್ಟವಾಗಿ ನಮೂದಿಸುವುದು)

6. ಅಭ್ಯರ್ಥಿಯ ಖಾಯಂ ವಿಳಾಸ :

7. ಅಭ್ಯರ್ಥಿಯ ಶಾಲಾ ಶಿಕ್ಷಣದ ವ್ಯಾಸಂಗ ಮಾಡಿದ ಶಾಲೆಗಳ ವಿವರಗಳು ಪ್ರಾಥಮಿಕ ಮಾಧ್ಯಮಿಕ ಪ್ರೌಢ

8. ಅಭ್ಯರ್ಥಿಯ ಹಾಗೂ ಅಭ್ಯರ್ಥಿಯ ತಂದೆ/ತಾಯಿ/ಪೋಷಕರ (ತಂದೆ/ತಾಯಿ ಜೀವಂತವಿಲ್ಲದಿದ್ದರೆ) ಇವರ ಒಟ್ಟು ವಾರ್ಷಿಕ ಆದಾಯ ಎಲ್ಲಾ ಮೂಲಗಳಿಂದ: 1) ವೇತನ ಶ್ರೇಣಿ 2) ಜಮೀನಿನ ವಿವರ 3) ಇತರ ಮೂಲಗಳು

9. ಆದಾಯ ತೆರಿಗೆ ಪಾವತಿದಾರರೇ?

10. ಸಂಪತ್ತು ತೆರಿಗೆ ಪಾವತಿದಾರರೇ?

11. ಮಾರಾಟ ತೆರಿಗೆ ಪಾವತಿದಾರರೇ?

**ಪ್ರಮಾಣೀಕೃತ ಘೋಷಣೆ**

**ಈ ಮೇಲೆ ನನ್ನಿಂದ ಒದಗಿಸಿದ ಮಾಹಿತಿ / ವಿವರಣೆಯು ನಾನು ತಿಳಿದಿರುವಷ್ಟರ ಮಟ್ಟಿಗೆ ಸತ್ಯವೆಂದು ಶ್ರದ್ಧಾಪೂರ್ವಕವಾಗಿ ದೃಢೀಕರಿಸುತ್ತೇನೆ ಮತ್ತು ಘೋಷಿಸುತ್ತೇನೆ.**

ಸ್ಥಳ: ತಮ್ಮ ವಿಧೇಯ

ದಿನಾಂಕ: (ಅಭ್ಯರ್ಥಿಯ ಸಹಿ)

ಮೇಲೆ ಒದಗಿಸಲಾದ ಮಾಹಿತಿಗಳು ಸತ್ಯವಾಗಿರುತ್ತದೆ ಎಂದು ಪ್ರಮಾಣಿಕರಿಸುತ್ತಾ, ಈ ಮಾಹಿತಿಗಳು ಅಸತ್ಯವೆಂದು ದೃಢಪಟ್ಟಲ್ಲಿ ಅಪರಾಧ ವಿಚಾರಣೆಗೆ ಬದ್ಧನಾಗುರುತ್ತೇನೆ

ಸ್ಥಳ: .......................... ತಂದೆ/ತಾಯಿ/ಪೋಷಕರ

ದಿನಾಂಕ: .................... (ತಂದೆ/ತಾಯಿ ಜೀವಂತವಿಲ್ಲದಿದ್ದರೆ)

(ಹೆಂಡತಿ/ಗಂಡ/ಇವರ ಸಹಿ)

**ಸ್ಥಳೀಯ ಇಬ್ಬರು ಸಾಕ್ಷಿದಾರರು**

ಅಭ್ಯರ್ಥಿಯ ಮತ್ತು ಅವರ ತಂದೆ/ತಾಯಿ/ಪೋಷಕರು/ಪತಿ/ಪತ್ನಿ ಇವರನ್ನು ಹಾಗೂ ಇವರ ಸಹಿಯನ್ನು ಗುರುತಿಸುತ್ತೇವೆ.

ಸಕ್ಷಿದಾರರ ಸಹಿ 1)

(ಪೂರ್ಣ ವಿಳಾಸದೊಂದಿಗೆ) 2)

**ಪರಿಶೀಲನಾ ಪ್ರಮಾಣ ಪತ್ರ**

1. ಶ್ರೀ/ಶ್ರೀಮತಿ ..................................................ಎಂಬುವವರ ಮಗ/ಮಗಳು/ಪತಿ/ಪತ್ನಿ ಶ್ರೀ/ಶ್ರೀಮತಿ/ಕುಮಾರಿ.........................................ಎಂಬುವವರು ಕರ್ನಾಟಕ ರಾಜ್ಯದ .............................ಜಿಲ್ಲೆಯ ವಿಭಾಗ .............................ಗ್ರಾಮ/ಪಟ್ಟಣ/ನಗರದಲ್ಲಿ ಸಾಮಾನ್ಯ ನಿವಾಸಿಯಾಗಿದ್ದಾರೆ ಮತ್ತು ಇವರು ಜನರಲ್ ಮೆರಿಟ್ ವರ್ಗಕ್ಕೆ ಸೇರಿದವರಾಗಿರುತ್ತಾರೆ.

2. ಶ್ರೀ/ಶ್ರೀಮತಿ/ಕುಮಾರಿ ಇವರ ತಂದೆ/ತಾಯಿ/ಪೋಷಕರು ಸರ್ಕಾರಿ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಡಿ 251 ಬಿಸಿಎ 94, ಬೆಂಗಳೂರು, ದಿನಾಂಕ: 31.01.1995 ರನ್ವಯ ಜನರಲ್ ಮೆರಿಟ್ ವರ್ಗದ ಮೇಲುಸ್ತರದಲ್ಲಿ (Creamy Layer) ಬರುವುದಿಲ್ಲವೆಂದು ಪ್ರಮಾಣೀಕರಿಸಲಾಗಿದೆ.

ಸ್ಥಳ : ತಹಶೀಲ್ದಾರ್

ದಿನಾಂಕ: ತಾಲ್ಲೂಕು ಕಛೇರಿಯ ಮೊಹರು

**ಸೂಚನೆ–1** : ಇದರಲ್ಲಿ ಉಪಯೋಗಿಸಲಾದ 'ಸಾಮಾನ್ಯ ನಿವಾಸಿ' ಎಂಬ ಪದವು 1950ರ ಜನತಾ ಪ್ರಾತಿನಿಧ್ಯ ಕಾಯ್ದೆಯ 20ನೇ ಅನುಚ್ಛೇದದಲ್ಲಿನ ಅರ್ಥವನ್ನು ಹೊಂದಿರುತ್ತದೆ. ಸೂಚನೆ–2: ಪರಿಶೀಲನಾ ಪ್ರಮಾಣ ಪತ್ರ ನೀಡುವ ಅಧಿಕೃತ ಅಧಿಕಾರಿಯು ಸರ್ಕಾರಿ ಆದೇಶ ಸಂಖ್ಯೆ ಎಸ್‌ಡಬ್ಲ್ಯೂಡಿ 251 ಬಿಸಿಎ 94, ಬೆಂಗಳೂರು, ದಿನಾಂಕ: 31.01.1995 ರನ್ವಯ ಮೇಲುಸ್ತರ (Creamy Layer) ದವರನ್ನು ಗುರುತಿಸಲು ನಿಗದಿಪಡಿಸಲಾಗಿರುವ ಅಂಶಗಳನ್ನು ವಿವರವಾಗಿ ಖಚಿತಪಡಿಸಿಕೊಂಡ ನಂತರವೇ ಪ್ರಮಾಣ ಪತ್ರ ನೀಡತಕ್ಕದ್ದು

**ನಮೂನೆ – 2**

**ಗ್ರಾಮೀಣ ಅಭ್ಯರ್ಥಿ ಪ್ರಮಾಣ ಪತ್ರ**

ಶ್ರೀ/ಶ್ರೀಮತಿ_ _ _ _ _ _ _ _ _ _ _ _ _ _ _ _ _ _ _ _ ರವರ ಮಗ/ಮಗಳು/ಪತಿ/ಪತ್ನಿ/ ಶ್ರೀ/ಶ್ರೀಮತಿ/ಕುಮಾರಿ_ _ _ _ _ _ _ _ _ ಜಿಲ್ಲೆ_ _ _ _ _ _ _ _ತಾಲ್ಲೂಕು_ _ _ _ _ _ _ _ _ ಗ್ರಾಮದಲ್ಲಿ _ _ _ _ _ _ _ _ವಾಸವಾಗಿರುವ ಇವರು ಒಂದನೇ ತರಗತಿಯಿಂದ _ _ _ _ _ _ _ _ _ _ ತರಗತಿಯವರೆಗೆ _ _ _ _ _ _ _ _ _ಜಿಲ್ಲೆ_ _ _ _ _ _ _ _ _ತಾಲ್ಲೂಕು_ _ _ _ _ _ _ _ ಪಟ್ಟಣ _ _ _ _ _ _ _ _ಶಾಲೆಯಲ್ಲಿ ವ್ಯಾಸಂಗ ಮಾಡಿ_ _ _ _ವರ್ಷ ನಡೆದ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರುತ್ತಾರೆ. ಈ ಶಾಲೆಯು ಅಭ್ಯರ್ಥಿಯು ವ್ಯಾಸಂಗ ಮಾಡಿದ ಅವಧಿಯಲ್ಲಿ ಕರ್ನಾಟಕ ಪೌರ ನಿಗಮಗಳ ಅಧಿನಿಯಮ, 1976 ಅಥವಾ ಕರ್ನಾಟಕ ಪೌರ ಸಭೆಗಳ ಅಧಿನಿಯಮ 1964ರ ಅಡಿಯಲ್ಲಿ ನಿರ್ದಿಷ್ಟಪಡಿಸಿ ಒಂದು ದೊಡ್ಡ ನಗರ ಪ್ರದೇಶ ಸಣ್ಣ ನಗರ ಪ್ರದೇಶ ಅಥವಾ ಪರಿವರ್ತನೆ ಹಂತದಲ್ಲಿರುವ ಪ್ರದೇಶಗಳ ಹೊರತಾದ ಪ್ರದೇಶದಲ್ಲಿತ್ತು.

ಮೇಲು ರುಜು ಸಹಿ

ಕ್ಷೇತ್ರ ಶಿಕ್ಷಣ ಅಧಿಕಾರಿ ಮುಖ್ಯೋಪಾಧ್ಯಾಯರ ಸಹಿ

ಕಛೇರಿಯ ಮೊಹರು ಮತ್ತು ಸಂಸ್ಥೆಯ ಮೊಹರು

ಸ್ಥಳ :

ದಿನಾಂಕ :

**ಕನ್ನಡ ಮಾಧ್ಯಮ ವ್ಯಾಸಂಗ ಪ್ರಮಾಣ ಪತ್ರ**

ಶ್ರೀ/ಶ್ರೀಮತಿ_ _ _ _ _ _ _ _ _ _ _ _ _ _ _ _ _ _ _ _ _ _ _ _ ರವರ ಮಗ/ಮಗಳು/ಪತಿ/ಪತ್ನಿ/ಶ್ರೀಮತಿ/ಕುಮಾರಿ_ _ _ _ _ _ _ _ _ _ _ ಜಿಲ್ಲೆ _ _ _ _ _ _ _ _ ತಾಲ್ಲೂಕು _ _ _ _ _ _ಗ್ರಾಮದಲ್ಲಿ ವಾಸವಾಗಿರುವ ಇವರು _ _ _ _ _ _ _ನೇ ತರಗತಿಯಿಂದ _ _ _ _ _ _ _ _ ನೇ ತರಗತಿಯವರೆಗೆ _ _ _ _ _ _ _ _ಶೈಕ್ಷಣಿಕ ವರ್ಷದಿಂದ _ _ _ _ _ _ _ಶೈಕ್ಷಣಿಕ ವರ್ಷದವರೆಗೆ _ _ _ _ _ _ _ _ _ _ _ _ _ _ಶಾಲೆಯಲ್ಲಿ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುತ್ತಾರೆಂದು ಪ್ರಮಾಣೀಕರಿಸಲಾಗಿದೆ.

ಸ್ಥಳ: ಮುಖ್ಯೋಪಾಧ್ಯಾಯರ ಸಹಿ ಮತ್ತು ಸಂಸ್ಥೆಯ ಮೊಹರು

ದಿನಾಂಕ:

**ಕರ್ನಾಟಕ ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: ಸಿಆಸುಇ 115 ಸೆನೆನಿ 2005, ದಿನಾಂಕ: 19.11.2005**

**CERTIFICATE FOR THE PERSONS WITH DISABILITIES**

This is to certify that Sri / Smt / Kum ……………………………………………………………………………………… son / wife / daughter of Shri ……………………………………………………………………………… Age ………………………… old, male / female, Registration No …………………………… is a case of ……………………….. He / She is physically disabled/visual disabled/speech & hearing disabled and has …………………….. % (……………………percent) permanent (physical impairment visual impairment speech & hearing impairment) in relation to his / her ……………………………

Note :

1. This condition is progressive/non-progressive/likely to improve/not likely to improve. *

2. Re-assessment is not recommended/is recommended after a period of ………………… months/years. *

* Strike out which is not applicable

(Recent Attested
Photograph showing
the disability affixed here)

| Sd/- | Sd/- | Sd/- |
|---|---|---|
| (Doctor) | (Doctor) | (Doctor) |

Countersigned by the
Medical Superintendent CMO/Head
of Hospital (with seal)

Signature /
Thumb impression
of the disabled person

ಕಛೇರಿ ಮೊಹರು :
ಇಲಾಖೆ :

**ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳು ಹೈದರಾಬಾದ್–ಕರ್ನಾಟಕ ಮೀಸಲಾತಿಗೆ ಸಲ್ಲಿಸಬೇಕಾದ ಪ್ರಮಾಣ ಪತ್ರ**

**ಅನುಬಂಧ–ಎ**

**ಸ್ವಗ್ರಾಮ ಪ್ರಮಾಣ ಪತ್ರ**

**(ಅನುಚ್ಛೇದ 371(ಜೆ) ಮೇರೆಗೆ)**

**(5(2)ನೇ ನಿಯಮ ನೋಡಿ)**

**(ಪ್ರಮಾಣ ಪತ್ರ ನೀಡಿಕೆಗಾಗಿ ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದರಾಬಾದ್–ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) ನಿಯಮಗಳು, 2013)**

ಶ್ರೀ/ಶ್ರೀಮತಿ__________________ರವರು________________ ರವರ ಮಗ/ಹೆಂಡತಿಯಾಗಿದ್ದು, ಇವರು ಕರ್ನಾಟಕ ರಾಜ್ಯದ __________ಜಿಲ್ಲೆಯ ____________ತಾಲ್ಲೂಕಿನ __________________ಗ್ರಾಮ/ಪಟ್ಟಣವನ್ನು ತನ್ನ ಸೇವಾ ಪುಸ್ತಕದಲ್ಲಿ ತನ್ನ ಸ್ವಗ್ರಾಮ/ಸ್ಥಳ ಎಂದು ಘೋಷಿಸಿರುತ್ತಾರೆ.

ಸೇವಾ ಪುಸ್ತಕದಲ್ಲಿರುವ ನಮೂದನ್ನು ನಾನು ಖುದ್ದಾಗಿ ಪರಿಶೀಲಿಸಿದ್ದೇನೆ ಮತ್ತು ಮೇಲಿನ ನಮೂದು ದಿನಾಂಕ: 01–01–2013ಕ್ಕೆ ಮುಂಚೆ ಸೇವಾ ಪುಸ್ತಕದಲ್ಲಿ ಇತ್ತೆಂದು ಸ್ವತಃ ಮನವರಿಕೆ ಮಾಡಿಕೊಂಡಿರುತ್ತೇನೆ.

ಸ್ಥಳ:
ದಿನಾಂಕ:

ನೇಮಕಾತಿ ಪ್ರಾಧಿಕಾರಿಯವರ ಸಹಿ
ಹೆಸರು :
ಪದನಾಮ :

**ಅನುಬಂಧ–ಎ**

**ಅರ್ಹತಾ ಪ್ರಮಾಣ ಪತ್ರ (ಅನುಚ್ಛೇದ 371(ಜೆ) ಮೇರೆಗೆ)**

**(3)(3)ನೇ ನಿಯಮ ನೋಡಿ)**

**(ಪ್ರಮಾಣ ಪತ್ರ ನೀಡಲು ಕರ್ನಾಟಕ ಸಾರ್ವಜನಿಕ ಉದ್ಯೋಗ**
**(ಹೈದರಾಬಾದ್–ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) ನಿಯಮಗಳು, 2013)**

ಶ್ರೀ/ಶ್ರೀಮತಿ__________________ರವರು________________ರವರ ಮಗ/ಹೆಂಡತಿಯಾಗಿದ್ದು, ಇವರು ಕರ್ನಾಟಕ ರಾಜ್ಯದ ________ ಜಿಲ್ಲೆಯ__________ ತಾಲ್ಲೂಕಿನ__________ ____________ ಗ್ರಾಮ/ಪಟ್ಟಣದ ಸ್ಥಳೀಯ ವ್ಯಕ್ತಿಯಾಗಿದ್ದಾರೆ.

ಸ್ಥಳ:____________ ಹೆಸರು__________________ ದಿನಾಂಕ:______________

ಅಸಿಸ್ಟೆಂಟ್ ಕಮೀಷನರ್
_____________ಉಪ ವಿಭಾಗ
_____________ಜಿಲ್ಲೆ.

**ರಾಜ್ಯ ಹಾಗೂ ಕೇಂದ್ರ ಸರ್ಕಾರಿ ನೌಕರರು ಸಲ್ಲಿಸಬೇಕಾದ ನಿರಾಕ್ಷೇಪಣ ಪ್ರಮಾಣ ಪತ್ರ**

ಶ್ರೀ/ಶ್ರೀಮತಿ.............................................................ಆದ ಇವರು ರಾಜ್ಯ/ ಕೇಂದ್ರ ಸರ್ಕಾರದಲ್ಲಿ ........................................... (ಪದನಾಮ)...........................................ಇಲಾಖೆಯಲ್ಲಿ ಖಾಯಂ/ ತಾತ್ಕಾಲಿಕ ಹುದ್ದೆಯನ್ನು ದಿನಾಂಕ:............................. ರಿಂದ ..................................ರವರೆಗೆ ಹೊಂದಿರುವರು. ಇವರು ............................................. ಹುದ್ದೆಯ ಪರೀಕ್ಷೆಗೆ ಅರ್ಜಿ ಸಲ್ಲಿಸಲು ಅನುಮತಿ ನೀಡಿದೆ.

ಸ್ಥಳ :

ದಿನಾಂಕ : ನೇಮಕಾತಿ ಪ್ರಾಧಿಕಾರಿಯವರ ಸಹಿ ಮತ್ತು ಮೊಹರು

**CERTIFICATE TO BE FURNISHED BY THE STATE/CENTRAL GOVT SERVANTS**

Certified that Sri/Smt……………………………………………………….……….holds a permanent/temporary post under the State/Central Govt as ………………………… (Designation) in the Dept. of …………………………………………. from ……………………… to …………………… He/She is permitted to apply for the post of ………………………………………………..

Signature of the Appointment Authority with Seal

Date :

Place :

**P.R 23** ಜಂಟಿ ನಿರ್ದೇಶಕರು (ಆಡಳಿತ)

**SC - 200** ಕೃಷಿ ಇಲಾಖೆ, ಬೆಂಗಳೂರು.

## ಕೃಷಿ ಇಲಾಖೆ

**ಕೃಷಿ ಆಯುಕ್ತರ ಕಛೇರಿ, ಶೇಷಾದ್ರಿ ರಸ್ತೆ, ಬೆಂಗಳೂರು-1.**

**ಅಧಿಸೂಚನೆ**

**ಸಂಖ್ಯೆ: ಕೃಸಿಪ-2/ವಿವ-105/2016-17, ಬೆಂಗಳೂರು ದಿನಾಂಕ: 09/02/2017.**

1. ಸರ್ಕಾರದ ಅಧಿಸೂಚನೆ ಸಂಖ್ಯೆ : ಎಜಿಡಿ/28/ಎಎನ್ಇ/2015, ದಿನಾಂಕ:19.11.2016ರ ಕರ್ನಾಟಕ ಕೃಷಿ ಸೇವೆಗಳು (ಸಹಾಯಕ ಕೃಷಿ ನಿರ್ದೇಶಕರು, ಕೃಷಿ ಅಧಿಕಾರಿ ಮತ್ತು ಸಹಾಯಕ ಕೃಷಿ ಅಧಿಕಾರಿಗಳ ನೇಮಕಾತಿ) (ವಿಶೇಷ) ನಿಯಮಗಳು-2016 ರನ್ವಯ ಅನುಸೂಚಿಯಲ್ಲಿ ನಮೂದಿಸಿರುವ ಕೃಷಿ ಇಲಾಖೆಯಲ್ಲಿ ಖಾಲಿ ಇರುವ ಈ ಕೆಳಕಂಡ ಗ್ರೂಪ್-ಎ ಮತ್ತು ಗ್ರೂಪ್-ಬಿ ಹುದ್ದೆಗಳನ್ನು ಭರ್ತಿ ಮಾಡಲು ಅರ್ಹ ಅಭ್ಯರ್ಥಿಗಳಿಂದ ಆನ್‌ಲೈನ್ ಮೂಲಕ ಅರ್ಜಿಗಳನ್ನು ಆಹ್ವಾನಿಸಿದೆ.

   In case of any discrepancy/ambiguity arise with regard to any of the above prescribed rules/procedures, Karnataka Civil Services(General Recruitment) Rules, 1977 and its amendment rules shall prevail.

| ಕ್ರ.ಸಂ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| | | ಹೈದ್ರಾಬಾದ್-ಕರ್ನಾಟಕ ಪ್ರಾದೇಶಿಕ ಸ್ಥಳೀಯ ವೃಂದದ ಹುದ್ದೆಗಳು |
| ಗ್ರೂಪ್-'ಎ' ಹುದ್ದೆಗಳು | | |
| 1. | ಸಹಾಯಕ ಕೃಷಿ ನಿರ್ದೇಶಕರು | 13 |
| ಗ್ರೂಪ್-'ಬ' ಹುದ್ದೆಗಳು | | |
| 2. | ಕೃಷಿ ಅಧಿಕಾರಿ | 73 |
| 3. | ಸಹಾಯಕ ಕೃಷಿ ಅಧಿಕಾರಿ | 126 |
| | ಒಟ್ಟು | 212 |

**ಟಿಪ್ಪಣಿ :-** ಮೇಲೆ ತಿಳಿಸಿರುವ ಹುದ್ದೆಗಳ ಸಂಖ್ಯೆ ಮತ್ತು ಅನುಬಂಧ-4ರಲ್ಲಿ ಹುದ್ದೆಗಳ ವರ್ಗೀಕರಣವು ಸರ್ಕಾರದ ಆದೇಶಗಳು ಮತ್ತು ನಿಯಮಗಳಂತೆ ಬದಲಾವಣೆಗೆ ಒಳಪಟ್ಟಿರುತ್ತದೆ.

1) ಅರ್ಜಿ ಸಲ್ಲಿಸಲು ಪ್ರಾರಂಭಿಕ ದಿನಾಂಕ: 10.02.2017.
2) ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ: 09.03.2017.
3) ಅರ್ಜಿ ಶುಲ್ಕವನ್ನು ಪಾವತಿಸಲು ಕೊನೆಯ ದಿನಾಂಕ: 10.03.2017 (ಕೆನರಾ ಬ್ಯಾಂಕ್ ಶಾಖೆಗಳ ಕಾರ್ಯದ ವೇಳೆಯೊಳಗೆ)

**ವಿಶೇಷ ಸೂಚನೆಗಳು:**

- ಒಬ್ಬ ಅಭ್ಯರ್ಥಿಯು ಯಾವುದೇ ಒಂದು ಹುದ್ದೆ ಅಥವಾ ಎಲ್ಲಾ ಹುದ್ದೆಗಳಿಗೆ ಒಂದೇ ಅರ್ಜಿ ಸಲ್ಲಿಸತಕ್ಕದ್ದು.
- ಒಬ್ಬ ಅಭ್ಯರ್ಥಿಯು ಒಂದಕ್ಕಿಂತ ಹೆಚ್ಚು ಹುದ್ದೆಗಳಿಗೆ ಅರ್ಜಿ ಸಲ್ಲಿಸಿದ್ದಲ್ಲಿ ಪ್ರತಿ ಹುದ್ದೆಗೂ ಪ್ರತ್ಯೇಕವಾಗಿ ಶುಲ್ಕ ಪಾವತಿಸುವುದು.
- ಅರ್ಜಿಗಳನ್ನು ಆನ್-ಲೈನ್ (On-line) (ಎಲೆಕ್ಟ್ರಾನಿಕ್ ಮಾರ್ಗ) ಮುಖಾಂತರ ಮಾತ್ರ ಸಲ್ಲಿಸತಕ್ಕದ್ದು. ಅರ್ಜಿಗಳನ್ನು ಖುದ್ದಾಗಿ ಅಥವಾ ಅಂಚೆ ಮೂಲಕ ಪ್ರತ್ಯೇಕವಾಗಿ ಸಲ್ಲಿಸಲು ಅವಕಾಶವಿರುವುದಿಲ್ಲ.

- ಅಭ್ಯರ್ಥಿಗಳು On-Line ಅರ್ಜಿಯನ್ನು ಭರ್ತಿ ಮಾಡುವ ಮುನ್ನ ಕಡ್ಡಾಯವಾಗಿ ನೀಡಿರುವ ಸೂಚನೆಗಳನ್ನು ಓದಿಕೊಳ್ಳತಕ್ಕದು ಹಾಗೂ ನೀಡಿರುವ ಸೂಚನೆಗಳನ್ವಯ ಅರ್ಜಿಯನ್ನು ಭರ್ತಿ ಮಾಡತಕ್ಕದ್ದು. ತಪ್ಪು ಮಾಹಿತಿಗಳನ್ನು ನೀಡಿ ಅರ್ಜಿ ಸಲ್ಲಿಸಿದಲ್ಲಿ ಅಂತಹವರ ವಿರುದ್ಧ ಇಲಾಖೆಯು ಕಾನೂನಿನನ್ವಯ ಸೂಕ್ತ ಕ್ರಮ ಕೈಗೊಳ್ಳಲಾಗುವುದು.
- ಈ ಅಧಿಸೂಚನೆಯನ್ವಯ ಆಯ್ಕೆಯಾಗುವ ಅಭ್ಯರ್ಥಿಗಳು ಹೈದರಾಬಾದ್-ಕರ್ನಾಟಕದ ಯಾವುದೇ ಭಾಗದಲ್ಲಿ ಸೇವೆ ಸಲ್ಲಿಸಲು ಬದ್ದರಾಗಿರತಕ್ಕದ್ದು.

ಅರ್ಜಿಯಲ್ಲಿ ಮೀಸಲಾತಿಗೆ ಸಂಬಂಧಿಸಿದ ಅಂಕಣದಲ್ಲಿ ಉಪಯೋಗಿಸಿದ ಪದಗಳ ಅರ್ಥವನ್ನು ಈ ಕೆಳಕಂಡಂತೆ ಅರ್ಥೈಸಿಕೊಳ್ಳಬೇಕು.

| | | | |
|---|---|---|---|
| ಸಾ.ಅ | ಸಾಮಾನ್ಯ ಅರ್ಹತೆ | GM | General Merit |
| ಪ.ಜಾ | ಪರಿಶಿಷ್ಟ ಜಾತಿ | SC | Scheduled Caste |
| ಪ.ಪಂ | ಪರಿಶಿಷ್ಟ ಪಂಗಡ | ST | Scheduled Tribe |
| ಪ್ರ–1 | ಪ್ರವರ್ಗ–1 | Cat–1 | Category–1 |
| 2ಎ | ಪ್ರವರ್ಗ–2ಎ | 2A | Category–2A |
| 2ಬಿ | ಪ್ರವರ್ಗ–2ಬಿ | 2B | Category–2B |
| 3ಎ | ಪ್ರವರ್ಗ–3ಎ | 3A | Category–3A |
| 3ಬಿ | ಪ್ರವರ್ಗ–3ಬಿ | 3B | Category–3B |
| ಮಾ.ಸೈ | ಮಾಜಿ ಸೈನಿಕ | Ex–MP | Ex–Military Person |
| ಗ್ರಾಮೀಣ | ಗ್ರಾಮೀಣ ಅಭ್ಯರ್ಥಿ | Rural | Rural Candidate |
| ಕ.ಮಾ.ಅ | ಕನ್ನಡ ಮಾಧ್ಯಮ ಅಭ್ಯರ್ಥಿ | KMS | Kannada Medium Student |
| ಅಂ.ವಿ | ಅಂಗವಿಕಲ | PH | Physically Handicapped Person |
| ಹೈ.ಕ | ಹೈದ್ರಾಬಾದ್–ಕರ್ನಾಟಕ | HK | Hyderabad–Karnataka |
| ಉ.ಮೂ.ವೃ | ಉಳಿದ ಮೂಲ ವೃಂದ | RPC | Residual Parent Cadre |

**2. ಶುಲ್ಕ:**

| | |
|---|---|
| ಸಾಮಾನ್ಯ ಅರ್ಹತೆಯ ಅಭ್ಯರ್ಥಿಗಳಿಗೆ | **₹.300/–** |
| ಪ್ರವರ್ಗ 2(ಎ), 2(ಬಿ), 3(ಎ), 3(ಬಿ) ಗೆ ಸೇರಿದ ಅಭ್ಯರ್ಥಿಗಳಿಗೆ | **₹.150/–** |
| ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, ಅಂಗವಿಕಲ ಮತ್ತು ಮಾಜಿ ಸೈನಿಕ ಅಭ್ಯರ್ಥಿಗಳಿಗೆ | **ಶುಲ್ಕ ಇಲ್ಲ** |

**2.1.** ಅರ್ಜಿಗಳನ್ನು ON LINE ಮೂಲಕ ಭರ್ತಿ ಮಾಡಿ ನಿಗಧಿತ ಶುಲ್ಕವನ್ನು ಕೆನರಾ ಬ್ಯಾಂಕ್‌ನ ಕೆಲಸದ ವೇಳೆಯೊಳಗೆ ಯಾವುದೇ ಶಾಖೆಗಳಲ್ಲಿ (e- Challan ಮೂಲಕ) ಪಾವತಿ ಮಾಡಬಹುದು. ಇದನ್ನು ಹೊರತುಪಡಿಸಿ ಬೇರೆ ಯಾವುದೇ ಮಾದರಿಯಲ್ಲಿ ಪಾವತಿಸಿರುವ ಶುಲ್ಕವನ್ನು ಸ್ವೀಕರಿಸಲಾಗುವುದಿಲ್ಲ. ಒಮ್ಮೆ ಶುಲ್ಕವನ್ನು ಪಾವತಿಸಿದ ನಂತರ ಅದನ್ನು ಯಾವುದೇ ಸಂದರ್ಭದಲ್ಲೂ ಹಿಂತಿರುಗಿಸಲಾಗುವುದಿಲ್ಲ. ನಿಗಧಿತ ಶುಲ್ಕ ಪಾವತಿಸದ ಅಭ್ಯರ್ಥಿಗಳ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

3. ಅಭ್ಯರ್ಥಿಗಳು ONLINE ಮೂಲಕ ಅರ್ಜಿ ಭರ್ತಿ ಮಾಡುವ ಮೊದಲು ಕೆಳಕಂಡ ಸೂಚನೆಗಳನ್ನು ಕಡ್ಡಾಯವಾಗಿ ತಿಳಿದುಕೊಳ್ಳತಕ್ಕದ್ದು.

**ಹಂತ 1 :–** ಅಭ್ಯರ್ಥಿಗಳು ಇಲಾಖೆಯ ಅಧಿಕೃತ ವೆಬ್‌ಸೈಟ್ "http://raitamitra.kar.nic.in" ನ ತೆರೆದ ಕೂಡಲೇ ಕಂಪ್ಯೂಟರ್ ಪರದೆಯ ಮೇಲೆ "ON–LINE APPLICATION FOR ADA/AO/AAO" ಎಂದು ಮೂಡುತ್ತದೆ. ಅದರ ಮೇಲೆ ಕ್ಲಿಕ್ ಮಾಡಿದ ಕೂಡಲೇ Registration ಪರದೆ ತೆರೆದುಕೊಳ್ಳುತ್ತದೆ.

**ಹಂತ 2 :–** Click on Register button ಒತ್ತಿ, Registration ಪರದೆಯ ಮೇಲೆ ಅಗತ್ಯ ಮಾಹಿತಿಯನ್ನು ಅಂದರೆ ಹೆಸರು, ತಂದೆ, ತಾಯಿಯ ಹೆಸರು, ಜನ್ಮ ದಿನಾಂಕ ಮತ್ತು ಮೊಬೈಲ್ ಸಂಖ್ಯೆ ಕಡ್ಡಾಯವಾಗಿ ನಮೂದಿಸತಕ್ಕದ್ದು. ಈ ಎಲ್ಲಾ ಮಾಹಿತಿಯನ್ನು ಸರಿಯಾಗಿ ಭರ್ತಿ ಮಾಡಿದ ನಂತರ Submit Button ಅನ್ನು ಒತ್ತಬೇಕು. ಆಗ ನಿಮಗೆ Login ID ಮತ್ತು Password ಅನ್ನು ನಿಮ್ಮ ಮೊಬೈಲ್ ಸಂಖ್ಯೆಗೆ ರವಾನಿಸಲಾಗುತ್ತದೆ. ಅಭ್ಯರ್ಥಿಯು ಮೊಬೈಲ್ ನಂಬರ್ ನೇಮಕಾತಿ ಮುಗಿಯುವವರೆಗೂ ಬದಲಾಯಿಸತಕ್ಕದ್ದಲ್ಲ.

**ಹಂತ 3 :–** ನಿಮಗೆ ನೀಡಲಾದ Login ID ಮತ್ತು Password ನ್ನು ಉಪಯೋಗಿಸಿ Login Button ಒತ್ತಿದಲ್ಲಿ APPLICATION ಮೂಡುತ್ತದೆ. ಇದರಲ್ಲಿ Candidate Details/Qualification Details/Examination Center Details/Photo uploading ಗಳಿರುತ್ತವೆ. ಈ ಪುಟದಲ್ಲಿ ಪರೀಕ್ಷಾ ಕೇಂದ್ರವನ್ನು ಆಯ್ಕೆಮಾಡುವ ಮತ್ತು ಕಡ್ಡಾಯ ಕನ್ನಡ ಭಾಷಾ ಪರೀಕ್ಷೆಯ ವಿವರಗಳು ಮೂಡಲಿದ್ದು ನೀವು ಬಯಸುವ ಪರೀಕ್ಷಾ ಕೇಂದ್ರವನ್ನು ಆಯ್ಕೆ ಮಾಡತಕ್ಕದ್ದು(ಪರೀಕ್ಷಾ ಕೇಂದ್ರಗಳನ್ನು ಅನುಬಂಧ–1ರಲ್ಲಿ ನೋಡತಕ್ಕದ್ದು) ಹಾಗೂ ಕನ್ನಡ ಉತ್ತೀರ್ಣತೆಯ ವಿವರಗಳನ್ನು ಕಡ್ಡಾಯವಾಗಿ ನಮೂದಿಸತಕ್ಕದ್ದು. **ಕಡ್ಡಾಯ ಕನ್ನಡ ಭಾಷೆ ಪರೀಕ್ಷೆ ತೆಗೆದುಕೊಳ್ಳುವ ಅಭ್ಯರ್ಥಿಗಳು ಕನ್ನಡ ಭಾಷೆ ಪರೀಕ್ಷೆ ಮತ್ತು ಸ್ಪರ್ಧಾತ್ಮಕ ಪರೀಕ್ಷೆಗೆ ಬೆಂಗಳೂರು ಕೇಂದ್ರವನ್ನು ಮಾತ್ರ ಆಯ್ಕೆ ಮಾಡಿಕೊಳ್ಳತಕ್ಕದ್ದು.** ತದನಂತರ ನೀವು ಸ್ಕ್ಯಾನ್ ಮಾಡಿಕೊಂಡಿರುವ ಇತ್ತೀಚಿನ ಭಾವಚಿತ್ರ, ಸಹಿ ಹಾಗೂ ನಿಮ್ಮ ಎಡಗೈ ಹೆಬ್ಬೆಟ್ಟಿನ ಗುರುತನ್ನೂ ಸಹ ಅಪ್ ಲೋಡ್ ಮಾಡತಕ್ಕದ್ದು. ಈ ಅರ್ಜಿ ನಮೂನೆಯಲ್ಲಿ ಅಭ್ಯರ್ಥಿಗಳಿಗೆ ಸಂಬಂಧಪಟ್ಟ ಪೂರ್ಣ ವಿವರಗಳನ್ನು ಜಾಗರೂಕತೆಯಿಂದ ಭರ್ತಿ ಮಾಡತಕ್ಕದ್ದು. ಇದಾದ ನಂತರ ಅಂತಿಮವಾಗಿ Final Submit button ಒತ್ತುವುದು.

**ಸೂಚನೆ :–** Final Submit Button ಅನ್ನು ಒತ್ತಿದ ನಂತರ ಅರ್ಜಿಯಲ್ಲಿ ಯಾವುದೇ ತಿದ್ದುಪಡಿಗಳನ್ನು ಮಾಡಲು ಅವಕಾಶ ಇರುವುದಿಲ್ಲ.

**ಭಾವಚಿತ್ರ, ಸಹಿ ಮತ್ತು ದಾಖಲೆಗಳ ಅಪ್ಲೋಡ್ :–** ಭಾವಚಿತ್ರ ಮತ್ತು ಸಹಿಯನ್ನು ಜೆಪಿಜಿ/ ಜೆಪಿಇಜಿ(JPG/JPEG) ಮಾದರಿಯಲ್ಲಿಯೇ ಅಪ್ಲೋಡ್ ಮಾಡಬೇಕು.

**ಭಾವಚಿತ್ರದ ಅಳತೆ:–** 3.5 cm x 4.5 cm (10 KB ರಿಂದ 150 KB ಇರತಕ್ಕದ್ದು)

**ಸಹಿಯ ಅಳತೆ:–** 3.5 cm x 1.5 cm (10 KB ರಿಂದ 150 KB ಇರತಕ್ಕದ್ದು)

**ಹೆಬ್ಬೆಟ್ಟಿನ ಗುರುತಿನ ಅಳತೆ:–** 3.5 cm x 1.5 cm Pixel (10 KB ರಿಂದ 150 KB ಇರತಕ್ಕದ್ದು)

**ಭಾವಚಿತ್ರವನ್ನು ಸ್ಕ್ಯಾನ್ ಮಾಡುವ ಮಾರ್ಗಸೂಚಿಗಳು :–** ಭಾವಚಿತ್ರ (ಜೆಪಿಜಿ/ಜೆಪಿಇಜಿ (JPG/JPEG) ಮಾದರಿಯಲ್ಲಿ ಮಾತ್ರ ಇರಬೇಕು)

ಬಿಳಿ ಅಥವಾ ತಿಳಿ ಬಣ್ಣದ ಹಾಳೆಯಲ್ಲಿ ಇತ್ತೀಚಿನ ಪಾಸ್‌ಪೋರ್ಟ್ ಅಳತೆಯ ಭಾವಚಿತ್ರವನ್ನು ಅಂಟಿಸಿ ಸ್ಕ್ಯಾನ್ ಮಾಡತಕ್ಕದ್ದು. ಕನ್ನಡಕ ಉಪಯೋಗಿಸಿದ್ದಲ್ಲಿ ನಿಮ್ಮ ಕಣ್ಣುಗಳು ಸರಿಯಾಗಿ ಕಾಣುತ್ತಿರುವುದನ್ನು ಖಚಿತಪಡಿಸಿಕೊಳ್ಳಿ. ಟೋಪಿ ಅಥವಾ ಕಪ್ಪು ಕನ್ನಡಕ ಧರಿಸಿ ತೆಗೆದ ಭಾವಚಿತ್ರಗಳನ್ನು ಅನುಮತಿಸುವುದಿಲ್ಲ. ಧಾರ್ಮಿಕ ತಲೆ–ಉಡುಪು ಧರಿಸಬಹುದು ಆದರೆ ಇದು ಮುಖವನ್ನು ಮರೆಮಾಚುವಂತೆ ಇರಬಾರದು. ಈ ಮೇಲಿನ ಸೂಚನೆಗಳಂತೆ ಭಾವಚಿತ್ರವನ್ನು ಅಪ್ಲೋಡ್ ಮಾಡುವುದು.

**ಹಂತ–4 :–** Final Submit button ಒತ್ತಿದ ನಂತರ Download e-Challan Button ಮೂಡುತ್ತವೆ. Download e-Challan Button ಅನ್ನು ಒತ್ತಿದ್ದಲ್ಲಿ ಶುಲ್ಕ ಪಾವತಿಸಲು ಪರದೆಯ ಮೇಲೆ ತ್ರಿಪ್ರತಿಯಲ್ಲಿ ಚಲನ್ ಮೂಡಲಿದ್ದು. Challan Download ಮಾಡಿಕೊಂಡು ಯಾವುದೇ ಕೆನರಾ ಬ್ಯಾಂಕ್‌ನ ಶಾಖೆಗಳಲ್ಲಿ ನಿಗಧಿತ ಅರ್ಜಿ ಶುಲ್ಕವನ್ನು ಪಾವತಿ ಮಾಡುವುದು.

**Note :-** ಶುಲ್ಕವನ್ನು ಪಾವತಿಸಲು ನಿಗಧಿಪಡಿಸಿದ ಕೊನೆಯ ದಿನಾಂಕ: 10.03.2017 (ಕೆನರಾ ಬ್ಯಾಂಕ್ ಶಾಖೆಗಳ ಕಾರ್ಯದ ವೇಳೆಯೊಳಗೆ) ನಂತರ ಶುಲ್ಕವನ್ನು ಸಂದಾಯ ಮಾಡಲು ಅವಕಾಶವಿರುವುದಿಲ್ಲ.

**ಹಂತ–5 :–** ಕೆನರಾ ಬ್ಯಾಂಕ್‌ನ ಶಾಖೆಯಲ್ಲಿ ಶುಲ್ಕ ಪಾವತಿಯ ಬಗ್ಗೆ ದೃಢೀಕರಣವಾದ ನಂತರವೇ ಇಲಾಖಾ ವೆಬ್‌ಸೈಟ್‌ನಲ್ಲಿ Download Application Button ಮೂಡುತ್ತದೆ. ಆದ್ದರಿಂದ ಅಭ್ಯರ್ಥಿಗಳು ಶುಲ್ಕ ಪಾವತಿಸಿದ ನಂತರ ಮತ್ತೆ ಇಲಾಖಾ ವೆಬ್‌ಸೈಟ್‌ಗೆ ತಮಗೆ ನೀಡಿರುವ Login ID ಉಪಯೋಗಿಸಿಕೊಂಡು Login ಆಗಿ Download Application Button ಒತ್ತಿದಲ್ಲಿ Application ಮೂಡುತ್ತದೆ. Application ನನ್ನು Download ಮಾಡಿಕೊಂಡು ನೇಮಕಾತಿ ಪ್ರಕ್ರಿಯೆ ಮುಕ್ತಾಯವಾಗುವವರೆಗೂ ಅಭ್ಯರ್ಥಿಗಳು ತಮ್ಮ ಬಳಿ ಇಟ್ಟುಕೊಳ್ಳತಕ್ಕದ್ದು.

**ಹಂತ–6 :–** ಕ್ರಮಬದ್ಧವಾಗಿ ಅರ್ಜಿಯನ್ನು ಸಲ್ಲಿಸಿದ ಅಭ್ಯರ್ಥಿಗಳ ಮೊಬೈಲ್ ಸಂಖ್ಯೆಗೆ ಅರ್ಜಿ ಸ್ವೀಕೃತಿಯ ಮಾಹಿತಿಯನ್ನು ಕಳುಹಿಸಲಾಗುವುದು.

**ಹಂತ–7 :–** On-line ಮೂಲಕ ಅರ್ಜಿಯನ್ನು ಭರ್ತಿಮಾಡುವ ಸಂದರ್ಭದಲ್ಲಿ ಯಾವುದಾದರೂ ತಾಂತ್ರಿಕ ತೊಂದರೆ ಅಥವಾ ಸಮಸ್ಯೆ ಎದುರಾದಲ್ಲಿ ಸಹಾಯವಾಣಿ (Help line) ಸಂಖ್ಯೆ 080–22074138 ಅನ್ನು (ಬೆಳಿಗ್ಗೆ 10–00 ಗಂಟೆಯಿಂದ ಸಂಜೆ 5–30 ಗಂಟೆಯವರೆಗೆ ಅಥವಾ ಅರ್ಜಿಯಲ್ಲಿ ನೀಡಿರುವ ಇ–ಮೇಲ್ ಸಹಾಯ ಮೂಲಕ) ಸಂಪರ್ಕಿಸಿ ಅಗತ್ಯ ಮಾಹಿತಿ ಪಡೆದು ಅರ್ಜಿ ಸಲ್ಲಿಸಬಹುದು.

**3.1** ಅಭ್ಯರ್ಥಿಗಳು ಅರ್ಜಿಯಲ್ಲಿ ತಮ್ಮ ಮಿಂಚಂಚೆ (ಇ–ಮೇಲ್) ಮತ್ತು ಮೊಬೈಲ್ ಸಂಖ್ಯೆ ಕಡ್ಡಾಯವಾಗಿ ನಮೂದಿಸತಕ್ಕದ್ದು.

**3.2** ಅಭ್ಯರ್ಥಿಗಳು ಅರ್ಜಿ ಸಲ್ಲಿಸಲು ನಿಗಧಿಪಡಿಸಿದ ಕೊನೆಯ ದಿನಾಂಕದವರೆಗೂ ವಿಳಂಬ ಮಾಡದೆ ಮುಂಚಿತವಾಗಿ ಅರ್ಜಿಗಳನ್ನು ಸಲ್ಲಿಸತಕ್ಕದ್ದು.

**3.3** ಶುಲ್ಕವನ್ನು ಪಾವತಿಸಲು ನಿಗಧಿಪಡಿಸಿದ ಕೊನೆಯ ದಿನಾಂಕ/ಸಮಯದ ನಂತರ ಶುಲ್ಕವನ್ನು ಸಂದಾಯ ಮಾಡಲು ಅವಕಾಶವಿರುವುದಿಲ್ಲ.

**4. ಅರ್ಹತಾ ಷರತ್ತುಗಳು:–**

- ಅಭ್ಯರ್ಥಿಯು ಭಾರತೀಯ ನಾಗರೀಕನಾಗಿರತಕ್ಕದ್ದು.
- ಒಬ್ಬ ಜೀವಂತ ಪತ್ನಿಗಿಂತ ಹೆಚ್ಚು ಮಂದಿ ಪತ್ನಿಯರನ್ನು ಹೊಂದಿರುವ ಪುರುಷ ಅಭ್ಯರ್ಥಿ ಮತ್ತು ಈಗಾಗಲೇ ಇನ್ನೊಬ್ಬ ಹೆಂಡತಿ ಇರುವ ವ್ಯಕ್ತಿಯನ್ನು ಮದುವೆಯಾಗಿರುವ ಮಹಿಳಾ ಅಭ್ಯರ್ಥಿಯು ಸರ್ಕಾರದಿಂದ ಪೂರ್ವಾನುಮತಿಯನ್ನು ಪಡೆಯದೇ ನೇಮಕಾತಿಗೆ ಅರ್ಹರಾಗುವುದಿಲ್ಲ.
- ಅಭ್ಯರ್ಥಿಯು ಮಾನಸಿಕವಾಗಿ ಮತ್ತು ದೈಹಿಕವಾಗಿ ಆರೋಗ್ಯವಂತರಾಗಿರಬೇಕು.
- ದೈಹಿಕವಾಗಿ ಅನರ್ಹರಾಗಿದ್ದಾರೆಂಬುದಾಗಿ ವೈದ್ಯಕೀಯ ಮಂಡಳಿಯ ವರದಿಯ ಮೇಲೆ ಅನರ್ಹರೆಂಬುದಾಗಿ ತಿರಸ್ಕರಿಸುವ ಪೂರ್ಣ ವಿವೇಚನೆಯನ್ನು ರಾಜ್ಯ ಸರ್ಕಾರ/ಆಯ್ಕೆ ಪ್ರಾಧಿಕಾರವು ಕಾಯ್ದಿರಿಸಿಕೊಂಡಿದೆ ಮತ್ತು ಸರ್ಕಾರದ ವಿವೇಚನೆಯು ಯಾವುದೇ ವಿಧದಲ್ಲೂ ಈ ನಿಯಮಗಳ ಮೂಲಕ ಸೀಮಿತವಾಗಿರುವುದಿಲ್ಲ.

ನಿಗಧಿತ ಶೈಕ್ಷಣಿಕ ಅರ್ಹತೆಯ ಜೊತೆಗೆ ಈ ಮೇಲ್ಕಂಡ ಅರ್ಹತೆಗಳನ್ನು ಹೊಂದಿರುವ ಅಭ್ಯರ್ಥಿಗಳು ನೇಮಕಾತಿಗಾಗಿ ಅರ್ಜಿ ಸಲ್ಲಿಸಲು ಅರ್ಹತೆಯನ್ನು ಹೊಂದಿರುತ್ತಾರೆ.

**5. ನೇಮಕಾತಿ ವಿಧಾನ :–**

ಸರ್ಕಾರದ ಅಧಿಸೂಚನೆ ಸಂಖ್ಯೆ:ಎಜಿಡಿ/28/ಎಎನ್‌ಇ/2015, ದಿನಾಂಕ:19.11.2016ರ ಕರ್ನಾಟಕ ಕೃಷಿ ಸೇವೆಗಳು (ಸಹಾಯಕ ಕೃಷಿ ನಿರ್ದೇಶಕರು, ಕೃಷಿ ಅಧಿಕಾರಿ ಮತ್ತು ಸಹಾಯಕ ಕೃಷಿ ಅಧಿಕಾರಿಗಳ ನೇಮಕಾತಿ) (ವಿಶೇಷ) ನಿಯಮಗಳು–2016ರ ಅನುಸೂಚಿಯಲ್ಲಿ ನಮೂದಿಸಿರುವ ಕೃಷಿ ಇಲಾಖೆಯಲ್ಲಿ ಖಾಲಿ ಇರುವ ಗ್ರೂಪ್–ಎ ಮತ್ತು ಗ್ರೂಪ್–ಬಿ ಹುದ್ದೆಗಳಿಗೆ ಅಭ್ಯರ್ಥಿಗಳ ಆಯ್ಕೆಯನ್ನು ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಪಡೆದ ಶೇಕಡಾ 50ರಷ್ಟು ಅಂಕಗಳನ್ನು ಮತ್ತು ಅಭ್ಯರ್ಥಿಗಳು ಶೈಕ್ಷಣಿಕ ಅರ್ಹತಾ ಪರೀಕ್ಷೆಯಲ್ಲಿ ಪಡೆದಿರುವ ಶೇಕಡಾ 50ರಷ್ಟು ಅಂಕಗಳನ್ನು ಆಧರಿಸಿ ಕಾಲಕಾಲಕ್ಕೆ ಚಾಲ್ತಿಯಲ್ಲಿರುವ ಮೀಸಲಾತಿ ನಿಯಮಗಳ ಅನುಸಾರ ಖಾಲಿ ಹುದ್ದೆಗಳಿಗೆ ಅನುಗುಣವಾಗಿ ಆಯ್ಕೆ ಮಾಡಲಾಗುತ್ತದೆ.

- **ಶೈಕ್ಷಣಿಕ ಅರ್ಹತಾ ಪರೀಕ್ಷೆ :–** ಸಹಾಯಕ ಕೃಷಿ ನಿರ್ದೇಶಕರ ಹುದ್ದೆಗೆ–ಎಂ.ಎಸ್ಸಿ(ಕೃಷಿ), ಕೃಷಿ ಅಧಿಕಾರಿ/ಸಹಾಯಕ ಕೃಷಿ ಅಧಿಕಾರಿ ಹುದ್ದೆಗಳಿಗೆ–ಬಿ.ಎಸ್ಸಿ(ಕೃಷಿ)ಯಲ್ಲಿ ಪಡೆದ ಶೇ.50 ರಷ್ಟು ಅಂಕಗಳನ್ನು ಆಯ್ಕೆಗೆ ಪರಿಗಣಿಸಲಾಗುವುದು.

ಆಯ್ಕೆಯಾದ ಅಭ್ಯರ್ಥಿಗಳ ಮೀಸಲಾತಿಗೆ (ಮೀಸಲಾತಿ ವರ್ಗೀಕರಣಗಳಂತೆ) ಸಂಬಂಧಿಸಿದಂತೆ ಸಿಂಧುತ್ವ ಪ್ರಮಾಣ ಪತ್ರವನ್ನು ಹಾಗೂ ಪೋಲೀಸ್ ವರದಿ, ದೇಹದಾರ್ಢ್ಯ ವೈದ್ಯಕೀಯ ಪ್ರಮಾಣಪತ್ರ ಇವುಗಳನ್ನು ಸಂಬಂಧಿಸಿದ ಸಕ್ಷಮ ಪ್ರಾಧಿಕಾರಗಳಿಂದ ಪಡೆದು ಆಯ್ಕೆ ಬಗ್ಗೆ ಸಮರ್ಥನೆಯಾದ ಪ್ರಕರಣಗಳಿಗೆ ಮಾತ್ರ ನೇಮಕಾತಿ ಆದೇಶ ನೀಡಲಾಗುವುದು.

ಅಭ್ಯರ್ಥಿಯು ಒಂದಕ್ಕಿಂತ ಹೆಚ್ಚು ಹುದ್ದೆಗಳಿಗೆ ಆಯ್ಕೆಯಾದಲ್ಲಿ ಅಂತಹ ಅಭ್ಯರ್ಥಿಯನ್ನು ಆಯ್ಕೆಯಾಗಿರುವ ಹುದ್ದೆಗಳಲ್ಲಿ ಉನ್ನತ ಹುದ್ದೆಗೆ ಮಾತ್ರ ಪರಿಗಣಿಸಲಾಗುವುದು.

➢ **ಮೇಲ್ಕಂಡ ಹುದ್ದೆಗಳ ಆಯ್ಕೆಗಾಗಿ ಮೌಖಿಕ ಪರೀಕ್ಷೆ ಇರುವುದಿಲ್ಲ.**

**5.1 ಕಡ್ಡಾಯ ಕನ್ನಡ ಪರೀಕ್ಷೆ :–**

ಮೇಲ್ಕಂಡ ಹುದ್ದೆಗಳ ಆಯ್ಕೆಗೆ ಅರ್ಹರಾಗಲು ಅಭ್ಯರ್ಥಿಗಳಿಗೆ ಎಸ್.ಎಸ್.ಎಲ್.ಸಿ ಪರೀಕ್ಷೆಯ ಕನ್ನಡ ಪ್ರಥಮ ಭಾಷೆಯ ಮಟ್ಟದ 150 ಅಂಕಗಳಿಗೆ ಪರೀಕ್ಷೆ ನಡೆಸಲಿದ್ದು, ಅದರಲ್ಲಿ ಕನಿಷ್ಠ 50 ಅಂಕಗಳೊಂದಿಗೆ ಕಡ್ಡಾಯವಾಗಿ ತೇರ್ಗಡೆ ಹೊಂದಲೇಬೇಕು. ನಿಗಧಿಪಡಿಸಿದ ಕನಿಷ್ಠ 50 ಅಂಕಗಳನ್ನು ಪಡೆಯದ ಅಭ್ಯರ್ಥಿಗಳು ಆಯ್ಕೆಗೆ ಅರ್ಹರಾಗುವುದಿಲ್ಲ. ಕನ್ನಡ ಪರೀಕ್ಷೆಯಲ್ಲಿ ಪಡೆದ ಅಂಕಗಳನ್ನು ಆಯ್ಕೆಗೆ ಪರಿಗಣಿಸುವುದಿಲ್ಲ. ಪರಂತು ಎಸ್.ಎಸ್.ಎಲ್.ಸಿ ಅಥವಾ ಅದಕ್ಕೆ ತತ್ಸಮಾನವೆಂದು ಘೋಷಿಸಲ್ಪಟ್ಟ ಯಾವುದೇ ಪರೀಕ್ಷೆಯಲ್ಲಿ ಅಥವಾ ಎಸ್.ಎಸ್.ಎಲ್.ಸಿ ಗಿಂತ ಮೇಲ್ಮಟ್ಟದ ಯಾವುದೇ ಪರೀಕ್ಷೆಯಲ್ಲಿ ಕನ್ನಡವನ್ನು ಪ್ರಥಮ/ದ್ವಿತೀಯ ಭಾಷೆ ಅಥವಾ ಐಚ್ಛಿಕ ವಿಷಯವಾಗಿ (ಆದರೆ ಸಂಯುಕ್ತ ಪತ್ರಿಕೆಯ ವಿಷಯಗಳಲ್ಲೊಂದಾಗಿರಬಾರದು) ಅಥವಾ ಮೇಲಿನ ಪರೀಕ್ಷೆಗಳಲ್ಲಿ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿ ತೇರ್ಗಡೆಯಾಗಿದ್ದರೆ ಅಥವಾ ಲೋಕಸೇವಾ ಆಯೋಗದಿಂದ ಈ ಹಿಂದೆ ನಡೆಸಲ್ಪಟ್ಟ ಕಡ್ಡಾಯ ಕನ್ನಡ ಭಾಷಾ ಪರೀಕ್ಷೆಯಲ್ಲಿ ಉತ್ತೀರ್ಣರಾಗಿದ್ದಲ್ಲಿ ಕನ್ನಡ ಭಾಷಾ ಪರೀಕ್ಷೆಯಲ್ಲಿ ತೇರ್ಗಡೆ ಹೊಂದುವ ಬಗ್ಗೆ ವಿನಾಯಿತಿ ನೀಡಲಾಗುವುದು.

**ಈ ಮೇಲಿನ ಹುದ್ದೆಗಳ ನೇಮಕಾತಿಗಾಗಿ ನಡೆಸುವ ಸ್ಪರ್ಧಾತ್ಮಕ ಪರೀಕ್ಷೆಯ ಪಠ್ಯಕ್ರಮವನ್ನು ಅನುಬಂಧ–2ರಲ್ಲಿ ತೋರಿಸಲಾಗಿದೆ.**

ಅಭ್ಯರ್ಥಿಗಳು ಅರ್ಜಿಯಲ್ಲಿ ಅವರು ಸ್ಪರ್ಧಾತ್ಮಕ ಪರೀಕ್ಷೆ ತೆಗೆದುಕೊಳ್ಳಲು ಇಚ್ಛಿಸುವ ಕೇಂದ್ರವನ್ನು ನಮೂದಿಸತಕ್ಕದು(ಅನುಬಂಧ–1ನ್ನು ನೋಡತಕ್ಕದ್ದು). ಅಭ್ಯರ್ಥಿಯು ಆಯ್ಕೆ ಮಾಡಿದ ಕೇಂದ್ರದಲ್ಲಿ ಸ್ಪರ್ಧಾತ್ಮಕ ಪರೀಕ್ಷೆಯನ್ನು ಕಾರಣಾಂತರಗಳಿಂದ ನಡೆಸಲಾಗದಿದ್ದ ಪಕ್ಷದಲ್ಲಿ ಪರೀಕ್ಷೆಯನ್ನು ಹತ್ತಿರದ ಕೇಂದ್ರದಲ್ಲಿ ನಡೆಸಲಾಗುವುದು. ಪರೀಕ್ಷೆಗಳ ದಿನಾಂಕವನ್ನು ಮುಂದೆ ಇಲಾಖೆಯ ವೆಬ್ ಸೈಟ್-"**http://raitamitra.kar.nic.in**"ನಲ್ಲಿ ಪ್ರಕಟಿಸಲಾಗುವುದು.

**5.2 ಸ್ಪರ್ಧಾತ್ಮಕ ಪರೀಕ್ಷಾ ವಿಧಾನ :–**

| **ಪತ್ರಿಕೆ** | **ವಿಷಯ** | **ಅಂಕಗಳು** | **ಪರೀಕ್ಷಾ ಅವಧಿ** | **ಪರೀಕ್ಷಾ ವಿಧಾನ** |
|---|---|---|---|---|
| **ಪತ್ರಿಕೆ 1** | ಸಾಮಾನ್ಯ ಜ್ಞಾನ | 100 ಅಂಕಗಳು | 1 1/2 ಗಂಟೆಗಳ ಅವಧಿ | (ವಸ್ತುನಿಷ್ಠ ಬಹು ಆಯ್ಕೆ ಪತ್ರಿಕೆ)<br>(Objective Multiple Choice Type) |
| **ಪತ್ರಿಕೆ 2** | ನಿರ್ದಿಷ್ಟ ಪ್ರಶ್ನೆ ಪತ್ರಿಕೆ | 200 ಅಂಕಗಳು | 3 ಗಂಟೆಗಳ ಅವಧಿ | (ವಸ್ತುನಿಷ್ಠ ಬಹು ಆಯ್ಕೆ ಪತ್ರಿಕೆ)<br>(Objective Multiple Choice Type) |

ಸದರಿ ಹುದ್ದೆಗಳ ನೇಮಕಾತಿಗೆ ಸ್ಪರ್ಧಾತ್ಮಕ ಪರೀಕ್ಷೆಯನ್ನು **ಕರ್ನಾಟಕ ಪರೀಕ್ಷಾ ಪ್ರಾಧಿಕಾರ** ಇವರ ಮೂಲಕ ಆಫ್ ಲೈನ್–ಓಎಂಆರ್ ಮಾದರಿ (Offline-OMR type) ಮುಖಾಂತರ ನಡೆಸಲಾಗುವುದು.

**ಋಣಾತ್ಮಕ ಮೌಲ್ಯ ಮಾಪನ (Negative Valuation) :** ಸ್ಪರ್ಧಾತ್ಮಕ ಪರೀಕ್ಷೆಗಳ ಪ್ರಶ್ನೆ ಪತ್ರಿಕೆಗಳಲ್ಲಿನ ಪ್ರತಿಯೊಂದು ಪ್ರಶ್ನೆಗೂ 04 ಪರ್ಯಾಯ ಉತ್ತರಗಳಿದ್ದು, ಅಭ್ಯರ್ಥಿಯು ಯಾವುದಾದರೂ ಒಂದು ಸರಿ ಉತ್ತರವನ್ನು ಆಯ್ಕೆ ಮಾಡತಕ್ಕದ್ದು. ಪ್ರತಿ ತಪ್ಪು ಉತ್ತರಕ್ಕೆ ಪ್ರಶ್ನೆಗೆ ನಿಗದಿಪಡಿಸಿದ ಅಂಕಗಳಿಂದ 0.25(1/4) ರಷ್ಟು ಅಂಕಗಳನ್ನು ಕಳೆಯಲಾಗುವುದು.

**ಸೂಚನೆ–1 :–** ಸರ್ಕಾರದ ಅಧಿಸೂಚನೆ ಸಂಖ್ಯೆ:ಎಜಿಡಿ/28/ಎಎನ್ಇ/2015, ದಿನಾಂಕ:19.11.2016ರ ಕರ್ನಾಟಕ ಕೃಷಿ ಸೇವೆಗಳು (ಸಹಾಯಕ ಕೃಷಿ ನಿರ್ದೇಶಕರು, ಕೃಷಿ ಅಧಿಕಾರಿ ಮತ್ತು ಸಹಾಯಕ ಕೃಷಿ ಅಧಿಕಾರಿಗಳ ನೇಮಕಾತಿ) (ವಿಶೇಷ) ನಿಯಮಗಳು–2016ರಲ್ಲಿ ಸೂಚಿಸಿರುವ ಪಠ್ಯಕ್ರಮವನ್ನು ಮತ್ತು ಕನ್ನಡ ಕಡ್ಡಾಯ ಭಾಷಾ ಪರೀಕ್ಷೆ ಪಠ್ಯಕ್ರಮವನ್ನು ಅನುಬಂಧ–2ರಲ್ಲಿ ನೋಡತಕ್ಕದ್ದು.

**ಸೂಚನೆ–2 :** ಸಹಾಯಕ ಕೃಷಿ ನಿರ್ದೇಶಕರು, ಕೃಷಿ ಅಧಿಕಾರಿ ಮತ್ತು ಸಹಾಯಕ ಕೃಷಿ ಅಧಿಕಾರಿ ಹುದ್ದೆಗಳಿಗೆ (ಹೈದ್ರಾಬಾದ್–ಕರ್ನಾಟಕ ಮತ್ತು ಉಳಿಕೆ ವೃಂದ ಸೇರಿದಂತೆ) ಒಂದೇ ಪರೀಕ್ಷೆ ನಡೆಸಲಾಗುವುದು.

**ಸೂಚನೆ–3:** ಸ್ಪರ್ಧಾತ್ಮಕ ಪರೀಕ್ಷೆಯ ಪ್ರಶ್ನೆ ಪತ್ರಿಕೆಗಳು ಕನ್ನಡ ಮತ್ತು ಆಂಗ್ಲ ಭಾಷೆಗಳೆರಡರಲ್ಲೂ ಇರುತ್ತವೆ. ಕನ್ನಡ ಭಾಷೆಯಲ್ಲಿರುವ ಪ್ರಶ್ನೆಗಳ ಭಾಷಾಂತರದಲ್ಲಿ ಏನಾದರೂ ಅಸ್ಪಷ್ಟತೆ ಇದ್ದಲ್ಲಿ ಅಭ್ಯರ್ಥಿಗಳು ಆಂಗ್ಲ ಭಾಷೆಯಲ್ಲಿರುವ ಪ್ರಶ್ನೆಗಳನ್ನು ನೋಡುವುದು ಹಾಗೂ ಇದೇ ಅಂತಿಮವಾಗಿರುತ್ತದೆ.

**6 ಶೈಕ್ಷಣಿಕ ವಿದ್ಯಾರ್ಹತೆ :–**

ಸರ್ಕಾರದ ಅಧಿಸೂಚನೆ ಸಂಖ್ಯೆ:ಎಜಿಡಿ/28/ಎಎನ್ಇ/2015, ದಿನಾಂಕ:19.11.2016ರ ಕರ್ನಾಟಕ ಕೃಷಿ ಸೇವೆಗಳು (ಸಹಾಯಕ ಕೃಷಿ ನಿರ್ದೇಶಕರು, ಕೃಷಿ ಅಧಿಕಾರಿ ಮತ್ತು ಸಹಾಯಕ ಕೃಷಿ ಅಧಿಕಾರಿಗಳ ನೇಮಕಾತಿ) (ವಿಶೇಷ) ನಿಯಮಗಳು–2016ರ ಅನುಸೂಚಿ(Schedule)ಯಲ್ಲಿ ನಿಗಧಿಪಡಿಸಿರುವಂತೆ ಅರ್ಜಿಗಳನ್ನು ಭರ್ತಿ ಮಾಡಲು ನಿಗಧಿಪಡಿಸಿದ ಕೊನೆಯ ದಿನಾಂಕದಂದು ಕೆಳಕಂಡಂತೆ ಆಯಾ ಹುದ್ದೆಗಳ ಮುಂದೆ ಸೂಚಿಸಿರುವ ವಿದ್ಯಾರ್ಹತೆಯನ್ನು ಅಭ್ಯರ್ಥಿಗಳು ಹೊಂದಿರಲೇಬೇಕು.

| **ಕ್ರ.ಸಂ.** | **ಹುದ್ದೆ** | **ಕನಿಷ್ಠ ವಿದ್ಯಾರ್ಹತೆ** |
|---|---|---|
| **1.** | ಸಹಾಯಕ ಕೃಷಿ ನಿರ್ದೇಶಕರು | ಭಾರತದಲ್ಲಿ ಕಾನೂನು ರೀತ್ಯಾ ಮತ್ತು ಐ.ಸಿ.ಎ.ಆರ್(ICAR) ನಿಂದ ಮಾನ್ಯತೆ ಪಡೆದು ಸ್ಥಾಪಿಸಲಾದ ಯಾವುದೇ ಕೃಷಿ ವಿಶ್ವವಿದ್ಯಾಲಯದಿಂದ ಸ್ನಾತಕೋತ್ತರ ಎಂ.ಎಸ್ಸಿ.(ಕೃಷಿ) ಪದವಿ ಪಡೆದಿರಬೇಕು. |
| **2.** | ಕೃಷಿ ಅಧಿಕಾರಿ | ಭಾರತದಲ್ಲಿ ಕಾನೂನು ರೀತ್ಯಾ ಮತ್ತು ಐ.ಸಿ.ಎ.ಆರ್(ICAR) ನಿಂದ ಮಾನ್ಯತೆ ಪಡೆದು ಸ್ಥಾಪಿಸಲಾದ |

